ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಮಾರ್ಚ್ ೨೦, ೨೦೧೪ (ಫಾಲ್ಗುಣ ೨೯, ಶಕ ವರ್ಷ ೧೯೩೫)<br>Bangalore, Thursday, March 20, 2014 (Phalguna 29, Shaka Varsha 1935) | ಸಂಚಿಕೆ ೧೨<br>Issue 12 |
|---|---|---|

# ಭಾಗ ೩

# ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

## ನಿರ್ದೇಶಕರು ಹಾಗೂ ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರ ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು

**ವಿಷಯ:** ಶ್ರೀ ಬಿ.ವಿ.ಜಯಂತ್, ಬೋಧಕರು, (ಪ್ರಸ್ತುತ ಅಮಾನತ್ತಿನಲ್ಲಿರುವ) ಶ್ರೀಮತಿ ಎಲ್.ವಿ.ಸರ್ಕಾರಿ ಪಾಲಿಟೆಕ್ನಿಕ್, ಹಾಸನ, ಇವರ ವಿರುದ್ಧದ ದೂರಿನ ಕುರಿತು ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಅಧಿಕೃತ ಜ್ಞಾಪನ ಸಂ: ಇಡಿ 148 ಡಿಟಿಇ 5,2011 ದಿ: 14.07.2011
2. ಈ ಕಛೇರಿಯ ಆದೇಶ ಸಂ: ಡಿಟಿಇ 8 ಡಿಇಕ್ಯೂ (1) 2011, ದಿ: 04.10.2012
3. ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿ ಕೆಸಿಎಸ್(ಸಿಸಿಎ) ನಿಯಮಾವಳಿ 1957ರ ನಿಯಮ 11ರ ಪ್ರಕಾರ ನೋಟಿಸ್ ದಿನಾಂಕ: 31.12.2012
4. ನಿರ್ದೇಶಕರ ಆದೇಶ ಸಂ: ಡಿಟಿಇ 8 ಡಿಇಕ್ಯೂ(1)2011, ದಿ:12.2.2013
5. 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಡಿಟಿಇ 8 ಡಿಇಕ್ಯೂ (1) 2011, ದಿ:15.10.2013,
6. ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿ ದಿ: 7.10.2013.

**ಪ್ರಸ್ತಾವನೆ:**

ಶ್ರೀ ಬಿ.ವಿ.ಜಯಂತ್, ಬೋಧಕರು (ಪ್ರಸ್ತುತ ಅಮಾನತ್ತಿನಲ್ಲಿರುವ) ಸರ್ಕಾರಿ ಶ್ರೀಮತಿ ಎಲ್.ವಿ.ಪಾಲಿಟೆಕ್ನಿಕ್, ಹಾಸನ, ಇವರು ಈ ಹಿಂದೆ ಸರ್ಕಾರಿ ಡಿಎಸಿಜಿ ಪಾಲಿಟೆಕ್ನಿಕ್, ಚಿಕ್ಕಮಗಳೂರು ಇಲ್ಲಿ ದಿನಾಂಕ: 03–11–2003 ರಿಂದ ದಿ: 18–7–2011 ವರೆಗೆ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಸಂಸ್ಥೆಯ ಪ್ರಿನ್ಸಿಪಾಲರ ವಿರುದ್ಧ ಹಾಗೂ ನಿರ್ದೇಶನಾಲಯದ ಅಧಿಕಾರಿಗಳ ವಿರುದ್ಧ ಮೇಲಾಧಿಕಾರಿಗಳ ಆದೇಶಗಳನ್ನು ಹಾಗೂ ಸರ್ಕಾರದ ನಿಯಮಾವಳಿಗಳನ್ನು ಉಲ್ಲಂಘಿಸಿ ಮಾನ್ಯ ಮುಖ್ಯಮಂತ್ರಿಗಳಿಗೆ, ಮಾನ್ಯ ಸಚಿವರುಗಳಿಗೆ, ಮಾನ್ಯ ಲೋಕಾಯುಕ್ತರಿಗೆ ಮತ್ತು ಸರ್ಕಾರಕ್ಕೆ ಪತ್ರಗಳನ್ನು ಬರೆಯುವುದನ್ನು ರೂಢಿಸಿಕೊಂಡಿದ್ದ ಹಿನ್ನೆಲೆಯಲ್ಲಿ ಪಾಲಿಟೆಕ್ನಿಕ್ ಸಂಸ್ಥೆಯ ಶೈಕ್ಷಣಿಕ ವಾತಾವರಣವನ್ನು ಕಲುಷಿತಗೊಳಿಸಿರುವುದು ಮೇಲ್ನೋಟಕ್ಕೆ ಕಂಡು ಬಂದಿದ್ದು, ವಿದ್ಯಾರ್ಥಿಗಳ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ನಿಯಮಾವಳಿ ಪ್ರಕಾರ ತಾಂತ್ರಿಕ ಶಿಕ್ಷಣ ಇಲಾಖೆಯ ನಿರ್ದೇಶಕರ ಅಧ್ಯಕ್ಷತೆಯಲ್ಲಿ ನಡೆದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯಲ್ಲಿ ಸದರಿಯವರನ್ನು ಸರ್ಕಾರಿ ಪಾಲಿಟೆಕ್ನಿಕ್, ಬೀದರ್ ಇಲ್ಲಿಗೆ ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾವಣೆ ಮಾಡಲು ತೀರ್ಮಾನ ತೆಗೆದುಕೊಂಡು, ಅದರಂತೆಯೇ ಸರ್ಕಾರಕ್ಕೆ ಶಿಫಾರಸ್ಸು ಮಾಡಲಾಗಿತ್ತು. ಸದರಿ ವರ್ಗಾವಣೆ ಪಟ್ಟಿಯಲ್ಲಿ ಸದರಿಯವರು ಸೇರಿದಂತೆ ಒಟ್ಟು 119 ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ವರ್ಗಾವಣೆಗೆ ಶಿಫಾರಸ್ಸು ಮಾಡಲಾಗಿತ್ತು. ಸರ್ಕಾರವು ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಪರಿಗಣಿಸಿ ನಿಯಮಾನುಸಾರ ಸೂಕ್ತ ಪ್ರಾಧಿಕಾರದ ಅನುಮೋದನೆ ಪಡೆದು ಉಲ್ಲೇಖ(1)ರಲ್ಲಿ ಸರ್ಕಾರದ ಅಧಿಕೃತ ಜ್ಞಾಪನದಲ್ಲಿ ದಿನಾಂಕ: 14–7–2011 ರಂದು 119 ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ವರ್ಗಾವಣೆ ಮಾಡಲಾಗಿತ್ತು.

ಶ್ರೀ ಬಿ.ವಿ.ಜಯಂತ್ ಇವರನ್ನು ಸರ್ಕಾರಿ ಪಾಲಿಟೆಕ್ನಿಕ್, ಬೀದರ್ ಇಲ್ಲಿಗೆ ವರ್ಗಾವಣೆ ಮಾಡಿರುವುದನ್ನು, ಸದರಿಯವರು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಪ್ರಶ್ನಿಸಿದ್ದು, ಮಾನ್ಯ ಆಡಳಿತ ನ್ಯಾಯ ಮಂಡಳಿಯ ಆದೇಶದಂತೆ, ಸದರಿಯವರಿಗೆ ಬೀದರ್‌ಗೆ ವರ್ಗಾಯಿಸಿರುವುದನ್ನು ಮಾರ್ಪಡಿಸಿ ನಿರ್ದೇಶಕರು ಸದರಿಯವರನ್ನು ಶ್ರೀಮತಿ ಎಲ್.ವಿ.ಪಾಲಿಟೆಕ್ನಿಕ್, ಹಾಸನ ಇಲ್ಲಿಗೆ ವರ್ಗಾಯಿಸಲಾಯಿತು. ಅದರಂತೆ ಶ್ರೀ ಬಿ.ವಿ.ಜಯಂತ್ ಇವರು ದಿ:24.02.2012 ರಂದು ಕಾರ್ಯವರದಿ ಮಾಡಿಕೊಂಡು ನಂತರ ದಿನಾಂಕ: 14–09–2012 ರಂದು ಘನತೆವೆತ್ತ ರಾಜ್ಯಪಾಲರಿಗೆ ಪತ್ರವನ್ನು ಬರೆದು ಲಂಚದ ರೂಪವಾಗಿ ರೂ. 1,00,000/–(ಒಂದು ಲಕ್ಷ ಮಾತ್ರ)ಗಳ ಚೆಕ್ಕನ್ನು (ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಇಂದಿರಾ ಗಾಂಧಿ ರೋಡ್ ಬ್ರಾಂಚ್, ಚಿಕ್ಕಮಗಳೂರು ಚೆಕ್ ನಂ: **701503** ಎಸ್.ಬಿ. ಅಕೌಂಟ್ ನಂ: **64029699601** ದಿನಾಂಕ: 14–09–2012) ಕಳುಹಿಸಿ ಇದನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ(ತಾಂತ್ರಿಕ ಶಿಕ್ಷಣ) ಇವರಿಗೆ ಸಂದಾಯ ಮಾಡಿ ನನ್ನನ್ನು ಚಿಕ್ಕಮಗಳೂರಿನಿಂದ ಬೀದರ್‌ಗೆ ವರ್ಗಾವಣೆ ಮಾಡಿರುವುದನ್ನು

ರದ್ದುಪಡಿಸುವಂತೆ ನಿರ್ದೇಶನ ನೀಡಬೇಕೆಂದು ಕೋರಿರುತ್ತಾರೆ ಹಾಗೂ ಸರ್ಕಾರದ ಅಧೀನ ಕಾರ್ಯದರ್ಶಿಯವರ ವಿರುದ್ಧ ಇಲ್ಲಸಲ್ಲದ ನಿರಾಧಾರವಾದ ಆರೋಪಗಳನ್ನು ಸಹ ಮಾಡಿರುತ್ತಾರೆ.

ಘನತೆವೆತ್ತ ರಾಜ್ಯಪಾಲರ ಕಾರ್ಯದರ್ಶಿಯವರು ದಿ: 17–09–2012 ರ ಪತ್ರದಲ್ಲಿ ಶ್ರೀ ಬಿ.ವಿ.ಜಯಂತ್ ಇವರು ಮಾನ್ಯ ರಾಜ್ಯಪಾಲರ ಹೆಸರಿಗೆ ಲಂಚದ ರೂಪದಲ್ಲಿ ಚೆಕ್ ಕಳುಹಿಸಿರುವ ಕ್ರಮವು ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿರುವುದರಿಂದ ಅವರ ದುರ್ನಡತೆ ವಿರುದ್ಧ ಕೂಡಲೇ ಕ್ರಮ ವಹಿಸಬೇಕೆಂದು ಮತ್ತು ಈ ಕುರಿತು ಪೋಲೀಸ್ ಇಲಾಖೆಯಿಂದ ತನಿಖೆಯನ್ನು ಸಹ ಮಾಡಬೇಕೆಂದು ಆದೇಶಿಸಲಾದ ಹಿನ್ನೆಲೆಯಲ್ಲಿ ಅವರ ವಿರುದ್ಧ ಕರ್ನಾಟಕ ಸಿವಿಲ್ ಸೇವಾ (ನಡತೆ) ನಿಯಮಗಳು 1966 ರ ಮತ್ತು ಭ್ರಷ್ಟಾಚಾರ ಪ್ರತಿಬಂಧಕ ಅಧಿನಿಯಮ 1988 ರ ಅನುಸಾರ ವ್ಯತಿರಿಕ್ತವಾಗಿದ್ದು, ತಮ್ಮ ವಿರುದ್ಧ ಕ್ರಿಮಿನಲ್ ಮೊಕದ್ದಮೆ ದಾಖಲಿಸಲು ಸ್ಥಳೀಯ ಪೋಲೀಸ್ ಠಾಣೆಗೆ ದೂರು ಸಲ್ಲಿಸಲಾಗಿರುತ್ತದೆ. ಈ ಕಛೇರಿ ಆದೇಶ ಸಂ: ಡಿಟಿಇ 108 ಡಿಇಕ್ಯೂ(1)2011 ದಿ:04.10.2012 ರಲ್ಲಿ ಕರ್ನಾಟಕ ನಾಗರೀಕ ಸೇವಾ(ಸಿಸಿಎ) ನಿಯಮಾವಳಿ 1917ರ 10(1)ಡಿ ಅನ್ವಯ ತಕ್ಷಣದಿಂದಲೇ ಜಾರಿಗೆ ಬರುವಂತೆ ಸದರಿಯವರನ್ನು ಅಮಾನತ್ತಿನಲ್ಲಿರಿಸಿ ಆದೇಶಿಸಲಾಗಿತ್ತು. ಆದ್ದರಿಂದ ಸದರಿಯವರು ಒಬ್ಬ ಜವಾಬ್ದಾರಿಯುತ ಸರ್ಕಾರಿ ನೌಕರರಾಗಿದ್ದು ಇಲ್ಲಸಲ್ಲದ ಆರೋಪವನ್ನು ಮಾಡಿ, ಲಂಚದ ಪ್ರಲೋಬನೆ ನೀಡಿ, ಗೌರವಕ್ಕೆ ಚ್ಯುತಿ ತರುವ ದುರ್ನಡತೆ ಹೊಂದಿದ್ದು, ನಿಯಮಗಳನ್ನು ಉಲ್ಲಂಘಿಸಿ ಕರ್ತವ್ಯದಲ್ಲಿ ಸತ್ಯ, ನಿಷ್ಠೆ ಹಾಗೂ ಪ್ರಾಮಾಣಿಕತೆಯನ್ನು ತೋರಿಸಲು ವಿಫಲರಾಗಿ ಕರ್ನಾಟಕ ನಾಗರೀಕ ಸೇವಾ ನಡತೆ (ವರ್ತನೆ) ನಿಯಮಗಳು 1966 ರ ನಿಯಮ 3(i) (ii) ಮತ್ತು (iii) ಹಾಗೂ '10' ನ್ನು ಉಲ್ಲಂಘಿಸಿರುವ ಆರೋಪಕ್ಕೆ ಒಳಗಾಗಿರುತ್ತಾರೆಂದು ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಆಪಾದಿತರ ವಿರುದ್ಧ ಉಲ್ಲೇಖ(3)ರಲ್ಲಿನ ನೋಟೀಸ್‌ನಲ್ಲಿ ಈ ಕೆಳಕಂಡ ಆರೋಪಗಳನ್ನು ಹೊರಿಸಿ ದೋಷಾರೋಪಣಾ ಪತ್ರವನ್ನು ಜಾರಿ ಮಾಡಲಾಗಿತ್ತು.

1. ಶ್ರೀ ಬಿ.ವಿ.ಜಯಂತ್, ಬೋಧಕರು, ಇವರು ದಿ: 03–11–2003 ರಿಂದ ದಿ: 18–7–2011 ವರೆಗೆ ಸರ್ಕಾರಿ ಡಿಎಸಿಜಿ ಪಾಲಿಟೆಕ್ನಿಕ್, ಚಿಕ್ಕಮಗಳೂರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸಮಯದಲ್ಲಿ ಸಂಸ್ಥೆಯ ಪ್ರಿನ್ಸಿಪಾಲರ ವಿರುದ್ಧ ಹಾಗೂ ನಿರ್ದೇಶನಾಲಯದ ಅಧಿಕಾರಿಗಳ/ಸಿಬ್ಬಂದಿ ವರ್ಗದವರ ವಿರುದ್ಧ ಅನಾವಶ್ಯಕವಾಗಿ ಇಲ್ಲಸಲ್ಲದ ಆರೋಪಗಳನ್ನು ಹೊರಿಸಿ ಸರ್ಕಾರಕ್ಕೆ, ಮಾನ್ಯ ಮುಖ್ಯಮಂತ್ರಿಯವರಿಗೆ, ಮಾನ್ಯ ಸಚಿವರುಗಳಿಗೆ, ಮಾನ್ಯ ಲೋಕಾಯುಕ್ತರಿಗೆ ಪತ್ರಗಳನ್ನು ಬರೆಯುವುದನ್ನು ರೂಢಿಸಿಕೊಂಡಿದ್ದು, ಸಾಮಾನ್ಯ ವರ್ಗಾವಣೆ ಸಮಯದಲ್ಲಿ ತಾಂತ್ರಿಕ ಶಿಕ್ಷಣ ನಿರ್ದೇಶನದ ಅಧ್ಯಕ್ಷತೆಯಲ್ಲಿ ನಡೆದ ವೃಂದ ನಿರ್ವಹಣಾ ಪ್ರಾಧಿಕಾರದ ಸಭೆಯಲ್ಲಿ ಸಾರ್ವಜನಿಕ ಹಿತದೃಷ್ಟಿ ಮೇರೆಗೆ ಸರ್ಕಾರಿ ಡಿಎಸಿಜಿ ಪಾಲಿಟೆಕ್ನಿಕ್, ಚಿಕ್ಕಮಗಳೂರು ಇಲ್ಲಿಂದ ಸರ್ಕಾರಿ ಪಾಲಿಟೆಕ್ನಿಕ್, ಬೀದರ್ ಇಲ್ಲಿಗೆ ನಿಯಮಾನುಸಾರ ಶಿಫಾರಸ್ಸು ಮಾಡಿ ಸರ್ಕಾರಕ್ಕೆ ಕಳುಹಿಸಲಾಗಿತ್ತು. ನಿರ್ದೇಶಕರ ಶಿಫಾರಸ್ಸಿನಂತೆ ವರ್ಗಾವಣೆ ಪ್ರಸ್ತಾವನೆಯನ್ನು ಅಂದಿನ ಉನ್ನತ ಶಿಕ್ಷಣ ಸಚಿವರು ಹಾಗೂ ಮಾನ್ಯ ಮುಖ್ಯಮಂತ್ರಿಗಳ ಅನುಮೋದನೆ ಪಡೆದು ಸರ್ಕಾರವು ವರ್ಗಾವಣೆ ಆದೇಶವನ್ನು ದಿ: 14–7–2011 ರಂದು ಸರ್ಕಾರದ ಅಧೀನ ಕಾರ್ಯದರ್ಶಿಯವರ ಪದನಾಮದೊಂದಿಗೆ ಹೊರಡಿಸಲಾಗಿರುತ್ತದೆ.

ಸದರಿಯವರು ಬೀದರ್ ಜಿಲ್ಲೆಗೆ ವರ್ಗಾವಣೆ ಮಾಡಿರುವುದನ್ನು ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಪ್ರಶ್ನಿಸಿದ್ದು ಮಾನ್ಯ ಆಡಳಿತ ನ್ಯಾಯ ಮಂಡಳಿಯು ನೀಡಿದ ಆದೇಶದಂತೆ ಸದರಿಯವರನ್ನು ಶ್ರೀಮತಿ ಎಲ್.ವಿ.ಪಾಲಿಟೆಕ್ನಿಕ್, ಹಾಸನ ಇಲ್ಲಿಗೆ ವರ್ಗಾಯಿಸಲಾಗಿತ್ತು. ಆದರೂ ನಿಯಮಾವಳಿಗೆ ವಿರುದ್ಧವಾಗಿ ಮಾನ್ಯ ರಾಜ್ಯಪಾಲರಿಗೆ ಲಂಚದ ರೂಪದಲ್ಲಿ ರೂ. 1.00 ಲಕ್ಷಗಳ ಚೆಕ್ಕನ್ನು ಕಳುಹಿಸಿ ಆ ಹಣವನ್ನು ಸರ್ಕಾರದ ಅಧೀನ ಕಾರ್ಯದರ್ಶಿಯವರಿಗೆ ನೀಡಿ ಅವರನ್ನು ಬೀದರ್ ಜಿಲ್ಲೆಗೆ ವರ್ಗಾವಣೆ ಮಾಡಿರುವ ಆದೇಶವನ್ನು ರದ್ದುಪಡಿಸುವಂತೆ ಕೋರಿರುತ್ತೀರಿ. ಈ ವರ್ತನೆಯು ಒಬ್ಬ ಸರ್ಕಾರಿ ನೌಕರನಿಗೆ ತರವಲ್ಲದ ನಡತೆಯಾಗಿರುತ್ತದೆ.

2. ಮಾನ್ಯ ರಾಜ್ಯಪಾಲರ ಹೆಸರಿಗೆ ಲಂಚದ ರೂಪವಾಗಿ ರೂ. 1,00,000/–(ಒಂದು ಲಕ್ಷ ಮಾತ್ರ)ಗಳ ಚೆಕ್ಕನ್ನು ಕಳುಹಿಸಿರುವ ವರ್ತನೆ ಒಬ್ಬ ಸರ್ಕಾರಿ ನೌಕರನಿಗೆ ತರವಲ್ಲದ ವರ್ತನೆಯಾಗಿದ್ದು, ಒಬ್ಬ ಸರ್ಕಾರಿ ನೌಕರನಾಗಿದ್ದು ಲಂಚ ನೀಡುವುದು ಹಾಗೂ ಪಡೆಯುವುದು ಕರ್ನಾಟಕ ಸಿವಿಲ್ ಸೇವಾ (ನಡತೆ)ನಿಯಮಗಳು, 1966 ರ ಮತ್ತು ಭ್ರಷ್ಟಾಚಾರ ಪ್ರತಿಬಂಧಕ ಅಧಿನಿಯಮ 1988 ರ ಅನುಸಾರ ವ್ಯತಿರಿಕ್ತವಾಗಿರುತ್ತದೆ. ಆದ್ದರಿಂದ ಈ ನಿಯಮವನ್ನು ಉಲ್ಲಂಘಿಸಿದ ಆರೋಪಕ್ಕೆ ಒಳಗಾಗಿರುತ್ತಾರೆ.

3. ಅನಾವಶ್ಯಕವಾಗಿ ತಾಂತ್ರಿಕ ಶಿಕ್ಷಣ ಇಲಾಖೆಯ ಅಧಿಕಾರಿ/ಸಿಬ್ಬಂದಿ ವರ್ಗದವರ ವಿರುದ್ಧ ಆರೋಪ ಮಾಡಿರುವುದರ ಬಗ್ಗೆ ಸದರಿಯವರಿಗೆ ದಾಖಲೆಗಳೊಂದಿಗೆ ದಿ: 02–04–2012ರ ಬೆಳಿಗ್ಗೆ 11–00 ಗಂಟೆಗೆ ನಿರ್ದೇಶಕರ ಕೊಠಡಿಯಲ್ಲಿ ನಡೆಯಲಿದ್ದ ಪೂರ್ವಭಾವಿ ವಿಚಾರಣೆಗೆ ಹಾಜರಾಗಲು ದಿ: 27–03–2012 ರಂದು ನಿರ್ದೇಶನಾಲಯದಿಂದ ಪತ್ರ ರವಾನಿಸಲಾಗಿದ್ದರೂ ಸಹ ನೀವು ವಿಚಾರಣೆಗೆ ಹಾಜರಾಗದೆ ಕರ್ತವ್ಯ ಲೋಪ ಎಸಗಿರುತ್ತೀರಿ. ಈ ರೀತಿಯ ಇವರ ವರ್ತನೆಯು ದುರುದ್ದೇಶದಿಂದ ಕೂಡಿರುವುದು ಮತ್ತು ಮೇಲಾಧಿಕಾರಿಗಳ ಆದೇಶ ಪಾಲಿಸದೇ ಇರುವುದು ಮೇಲ್ನೋಟಕ್ಕೆ ಕಂಡಬರುತ್ತದೆ.

4. ಒಬ್ಬ ಜವಾಬ್ದಾರಿಯುತ ಸರ್ಕಾರಿ ನೌಕರರಾಗಿದ್ದು ಯಾವುದೇ ದಿನಪತ್ರಿಕೆಗಳಲ್ಲಿ ಮಾಧ್ಯಮಗಳಲ್ಲಿ ಭಾಗವಹಿಸುವುದು ನಿಯಮಬಾಹಿರವಾಗಿದ್ದು ಈ ನಿಯಮಗಳನ್ನು ಉಲ್ಲಂಘಿಸಿ ಮಾಧ್ಯಮಗಳಲ್ಲಿ ಭಾಗವಹಿಸಿ ಸದರಿಯವರನ್ನು ಅಮಾನತ್ತುಪಡಿಸಿರುವ ಬಗ್ಗೆ ಸರ್ಕಾರಿ ಅಧಿಕಾರಿಗಳ ವಿರುದ್ಧ ಹಾಗೂ ನಿರ್ದೇಶನಾಲಯದ ಅಧಿಕಾರಿಗಳ ವಿರುದ್ಧ ಇಲ್ಲಸಲ್ಲದ ಆರೋಪಗಳನ್ನು ಮಾಡಿ ಕರ್ತವ್ಯ ಲೋಪ ಎಸಗಿರುತ್ತಾರೆ.

5. ದೂರದರ್ಶನ ಮಾಧ್ಯಮದಲ್ಲಿ ಅಂದರೆ ದಿ: 20–10–2012 ರಂದು ಮಧ್ಯಾಹ್ನ 2.00 ಘಂಟೆಯಿಂದ, "ಟಿವಿ–9" ಚಾನಲ್‌ನಲ್ಲಿ ಪ್ರಸಾರವಾದ ಕಾರ್ಯಕ್ರಮದಲ್ಲಿ ಮೇಲಾಧಿಕಾರಿಗಳು ಮತ್ತು ಸರ್ಕಾರದ ವಿರುದ್ಧ ಟೀಕೆ ಮತ್ತು ಹೇಳಿಕೆಗಳನ್ನು ನೀಡಿ, ಕೆ.ಸಿ.ಎಸ್. (ಸಿಸಿಎ) ನಿಯಮಗಳು 1996ರ ನಿಯಮ '10' ನ್ನು ಉಲ್ಲಂಘಿಸಿದ ಆರೋಪಕ್ಕೆ ಒಳಗಾಗಿರುತ್ತಾರೆ.

ಇದಕ್ಕೆ ಉತ್ತರವಾಗಿ ದಿ:20.01.2013ರಂದು ಪತ್ರವನ್ನು ಸಲ್ಲಿಸಿ, ದಿ: 16.11.2012 ಮತ್ತು ದಿ: 29.12.2012ರಲ್ಲಿ ಸಲ್ಲಿಸಿರುವ ಮನವಿಯಂತೆ ತನಿಖೆ ನಡೆಸಲು ಮತ್ತು ಆರೋಪಣಾ ಪಟ್ಟಿಯಲ್ಲಿ ಅನುಬಂಧ–4ರಲ್ಲಿ ಸಾಕ್ಷಿಯಾಗಿ ಕಾಣಿಸಿರುವ ಶ್ರೀ ಪಿ.ಎಸ್.ಚಂದ್ರಶೇಖರ್‌ರಾವ್ ಇವರು ಮಾಡಿರುವ ಅಪರಾಧದ ಬಗ್ಗೆ ಯಾವುದೇ ತನಿಖೆ ಮಾಡದೇ ಕಾನೂನು ಬಾಹಿರವಾಗಿ ಮುಂಬಡ್ತಿ ನೀಡಿ ಅವರನ್ನು 4ನೇ ಸಾಕ್ಷಿಯಾಗಿ ನಮೂದಿಸಿರುವುದು Violation of Procecution Procedure ಆಗುತ್ತದೆಯೆಂದು ದೋಷಾರೋಪಣಾ ಪಟ್ಟಿಗೆ ಸಂಬಂಧಿಸಿದಂತೆ ಯಾವುದೇ ಸಮಜಾಯಿಷಿಯನ್ನು ನೀಡದೇ ಆರೋಪ ಪಟ್ಟಿಯನ್ನು ಸಂಪೂರ್ಣವಾಗಿ ತಿರಸ್ಕರಿಸಿರುತ್ತಾರೆ.

ಸದರಿಯವರು ದಿ:16.11.2012 ಮತ್ತು ದಿ:29.11.2012ರ ಮನವಿ ಪತ್ರಗಳಲ್ಲಿ, ಅವರ ವರ್ಗಾವಣೆ ಕ್ರಮಬದ್ಧತೆಯನ್ನು ಪ್ರಶ್ನಿಸಿ, ನಿಯಮಾನುಸಾರ ವಿಚಾರಣೆ ನಡೆಸಲು "ರಾಜ್ಯಪಾಲರಿಗೆ ಲಂಚ ನೀಡಿದ ಪ್ರಕರಣವಾಗಿದ್ದು ಈ ಪ್ರಕರಣದಲ್ಲಿ ರಾಜ್ಯಪಾಲರಿಗಿಂತ ಉನ್ನತ ಹುದ್ದೆಯಲ್ಲಿರುವವರೇ ತನಿಖೆ ನಡೆಸಬೇಕಾಗಿದೆ" ಎಂದು ತಿಳಿಸಿರುತ್ತಾರೆ.

ಈ ಮೇಲ್ಕಂಡ ಎಲ್ಲಾ ಆರೋಪಗಳಿಂದ ಸದರಿಯವರು ಒಬ್ಬ ಸರ್ಕಾರಿ ನೌಕರನಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿರುವುದರೊಂದಿಗೆ ಕರ್ತವ್ಯದಲ್ಲಿ ಸತ್ಯ, ನಿಷ್ಠೆ ಹಾಗೂ ಪ್ರಾಮಾಣಿಕತೆಯನ್ನು ತೋರಿಸಲು ವಿಫಲರಾಗಿ ಕರ್ನಾಟಕ ನಾಗರೀಕ ಸೇವಾ ನಡತೆ (ವರ್ತನೆ) ನಿಯಮಗಳು 1966 ರ ನಿಯಮ 3(i) (ii) ಮತ್ತು (iii) ಹಾಗೂ '10' ನ್ನು ಉಲ್ಲಂಘಿಸಿರುವ ಆರೋಪದ ಮೇಲೆ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11ರ ಪ್ರಕಾರ ಶಿಸ್ತು ಕ್ರಮಕ್ಕೆ ಒಳಗಾಗಿರುತ್ತಾರೆ.

ಸದರಿಯವರು ನೀಡಿರುವ ವಿವರಣೆಯನ್ನು ಒಪ್ಪದೇ ಶಿಸ್ತು ಪ್ರಾಧಿಕಾರವು ಸತ್ಯಾಸತ್ಯತೆಯನ್ನು ತಿಳಿಯಲು ಕೆ.ಸಿ.ಎಸ್(ಸಿಸಿಎ) ನಿಯಮಗಳು 1957ರ ನಿಯಮ(11)ರ ಪ್ರಕಾರ ಉಲ್ಲೇಖ(4)ರಲ್ಲಿನ ಈ ಕಛೇರಿಯ ಆದೇಶದಲ್ಲಿ ಇಲಾಖಾ ವಿಚಾರಣೆ ನಡೆಸಲು ಶ್ರೀ ಎ.ಕೃಷ್ಣಪ್ಪ, ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು (ನಿವೃತ್ತ) ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಆಪಾದಿತರು ಇಲಾಖಾ ವಿಚಾರಣೆಯ ನೋಟೀಸ್ ತಲುಪಿದ ನಂತರ ಅವರ ಮುಂದೆ ಹಾಜರಾಗಿರುತ್ತಾರೆ. ದೋಷಾರೋಪಣಾ ಪಟ್ಟಿಯಲ್ಲಿ ಕಾಣಿಸಿರುವ ಆರೋಪಗಳನ್ನು ಅವರಿಗೆ ಓದಿ ಹೇಳಲಾಗಿದ್ದು, ಅದಕ್ಕೆ ಅವರು ಆರೋಪಗಳನ್ನು ನಿರಾಕರಿಸಿರುತ್ತಾರೆ. ಅವರಿಗೆ ಅನುಬಂಧ-3 ರಲ್ಲಿ ಕಾಣಿಸಿರುವ ದಾಖಲಾತಿಗಳ ಪ್ರತಿಯನ್ನು ಒದಗಿಸಲಾಗಿದೆ. ಅವರ ಪರ ವಾದಿಸಲು ರಕ್ಷಣಾ ಸಹಾಯಕರನ್ನು ಇಟ್ಟುಕೊಳ್ಳಲು ಅವಕಾಶ ನೀಡಿದ್ದರೂ ಸಹ ನಿರಾಕರಿಸಿರುತ್ತಾರೆ.

ಇಲಾಖೆಯ ಪರ ಆಪಾದಿತರ ವಿರುದ್ಧ ಮಾಡಲಾಗಿರುವ ಆರೋಪಗಳನ್ನು ರುಜುವಾತುಪಡಿಸಲು ಸಾಕ್ಷಿದಾರರನ್ನಾಗಿ ಶ್ರೀ ಜಿ.ಎಸ್.ಜಗದೀಶ, ಉಪಕಾರ್ಯದರ್ಶಿ, ಶಿಕ್ಷಣ ಇಲಾಖೆ(ಉನ್ನತ), ಶ್ರೀ ಬಿ.ವೆಂಕಟಸ್ವಾಮಿ, ನಿವೃತ್ತ ಆಡಳಿತಾಧಿಕಾರಿಗಳು, ತಾಂತ್ರಿಕ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು, ಶ್ರೀ ಪಿ.ಎಸ್.ಚಂದ್ರಶೇಖರ್‌ರಾವ್, ಪ್ರಿನ್ಸಿಪಾಲರು, ಸರ್ಕಾರಿ ವಿಐಎಸ್‌ಎಸ್‌ಜೆ ಪಾಲಿಟೆಕ್ನಿಕ್, ಭದ್ರಾವತಿ ಮತ್ತು ಶ್ರೀ ವಿ.ಗೋಪಾಲ್, ರಿಜಿಸ್ಟ್ರಾರ್, ತಾಂತ್ರಿಕ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇವರುಗಳನ್ನು ವಿಚಾರಣೆ ಮಾಡಿ ದಾಖಲಾತಿಗಳನ್ನು ಗುರ್ತಿಸಲಾಯಿತು. ಆಪಾದಿತರು ಇಲಾಖಾ ಪರ ಸಾಕ್ಷಿದಾರರನ್ನು ಪಾಟೀ ಸವಾಲು ಮಾಡಿ ಲಿಖಿತ ರಕ್ಷಣಾ ಹೇಳಿಕೆಯನ್ನು ದಿ: 21.08.2013ರಂದು ಸಲ್ಲಿಸಿರುತ್ತಾರೆ. ಮಂಡನಾಧಿಕಾರಿಗಳು ಸಹ ತಮ್ಮ ಲಿಖಿತ ವಾದ ಸಲ್ಲಿಸಿರುತ್ತಾರೆ. ಅದರ ಪ್ರತಿಯನ್ನು ಆಪಾದಿತರಿಗೆ ಅಂಚೆ ಮೂಲಕ ಕಳುಹಿಸಿದೆ. ಅಂತಿಮವಾಗಿ ವಿಚಾರಣಾಧಿಕಾರಿಗಳು ವಿಚಾರಣೆ ಪೂರ್ಣಗೊಳಿಸಿ ವರದಿಯನ್ನು ಈ ಕಛೇರಿಗೆ ದಿ:07.10.2013 ರಂದು ಸಲ್ಲಿಸಿರುತ್ತಾರೆ. ಕೆಳಕಂಡ ಅಂಶಗಳನ್ನು ಉಲ್ಲೇಖಿಸಿ ಸದರಿಯವರ ವಿರುದ್ಧ ಹೊರಿಸಲಾಗಿರುವ ಆರೋಪ ರುಜುವಾತಾಗಿದೆ ಎಂದು ಅಂತಿಮ ವರದಿಯಲ್ಲಿ ತಿಳಿಸಿರುತ್ತಾರೆ.

ಈ ವಿಚಾರಣಾ ವರದಿಯನ್ನು ಲಗತ್ತಿಸಿ ಆರೋಪಿಗೆ ಈ ಕಛೇರಿಯ ಪತ್ರ ಸಂ: ಡಿಟಿಇ 8 ಡಿಇಕ್ಯೂ(1)2011, ದಿ:15.10.2013ರಲ್ಲಿ ಎರಡನೇ ಕಾರಣ ಕೇಳುವ ನೋಟಿಸಿನ ಮೂಲಕ ಜಾರಿ ಮಾಡಿ ಲಿಖಿತ ಸಮಜಾಯಿಷಿ ಸಲ್ಲಿಸಲು 30 ದಿನಗಳ ಕಾಲಾವಕಾಶ ನೀಡಲಾಗಿತ್ತು. ಅದಕ್ಕೆ ಸಂಬಂದಿಸಿದಂತೆ ಸದರಿಯವರು ದಿ:29.10.2013ರಂದು ಪ್ರಧಾನ ಕಾರ್ಯದರ್ಶಿ, ಆಡಳಿತ ಸುಧಾರಣಾ ಇಲಾಖೆ ಇವರಿಗೆ ಸಲ್ಲಿಸಿರುವ ಪತ್ರದಲ್ಲಿ ತಮ್ಮ ವರ್ಗಾವಣೆ ಮಾಡಿ ಹೊರಡಿಸಿರುವ ಆದೇಶದಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿಯವರ ಅಧಿಕಾರದ ವ್ಯಾಪ್ತಿಯನ್ನು ಪ್ರಶ್ನಿಸಿರುತ್ತಾರೆ ಮತ್ತು ದೋಷಾರೋಪಣಾ ಪಟ್ಟಿಯಲ್ಲಿರುವುದೇ ಒಂದು ತನಿಖೆ ಮಾಡಿದ್ದೇ ಇನ್ನೊಂದು ಇದನ್ನು "ಆರೋಪ ಪಟ್ಟಿಯ ದೋಷ" ಎಂದು ಏಕೆ ಪರಿಗಣಿಸಬಾರದು? ತಾವು ಇದನ್ನು ಹೇಗೆ ಸಮರ್ಥಿಸುವಿರಿ? ಎಂದು ಪ್ರಶ್ನಿಸಿರುತ್ತಾರೆ ಎಂದು ಅವರ ಪ್ರತಿ ವಾದವನ್ನು ಸಾರಾಸಗಟಾಗಿ ತಿರಸ್ಕರಿಸಿರಿ, ಅನೇಕ ಲೋಪದೋಷಗಳನ್ನು ಇಲಾಖಾವಾದವನ್ನು ಪುರಸ್ಕರಿಸಿ ತಮ್ಮ ವಿರುದ್ಧದ ಆರೋಪ ಸಾಬೀತು ಮಾಡಿರುವುದು ಸಹಜ ನ್ಯಾಯಕ್ಕೆ ಕಗ್ಗೊಲೆ. ಆದರೂ ಅದನ್ನು ಒಪ್ಪಿಕೊಂಡು ಪ್ರಿವೆನ್ಷನ್ ಆಫ್ ಕರಪ್ಷನ್ ಆಕ್ಟ್ 1988ರನ್ವಯ ನನ್ನ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಹೂಡುವುದಾದರೆ ನನ್ನ ಬಳಿ ಸಾಕಷ್ಟು ದಾಖಲೆಗಳು ಇವೆ ಎಂದು, ತಮಗೆ ಸ್ಪಷ್ಟ ಸ್ಪಷ್ಟೀಕರಣ ಲಭ್ಯವಾದ ನಂತರ 2ನೇ ಕಾರಣ ಕೇಳುವ ನೋಟಿಸಿಗೆ ಉತ್ತರ ಪಡೆಯಲು 15 ದಿನಗಳ ಅವಕಾಶ ನೀಡುವಂತೆ ಶಿಸ್ತು ಪ್ರಾಧಿಕಾರ ತಾಂತ್ರಿಕ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು ಇವರಿಗೆ ತಾವು ನಿರ್ದೇಶನ ನೀಡಬೇಕೆಂದು ಕೋರಿರುತ್ತಾರೆ. ಆದರೆ ಈವರೆಗೆ ಯಾವುದೇ ಸಮಜಾಯಿಷಿಯನ್ನು ನೀಡಿರುವುದಿಲ್ಲ.

ವಿಚಾರಣಾಧಿಕಾರಿಗಳ ಅಂತಿಮ ವರದಿಯನ್ನು ಪರಿಶೀಲಿಸಿದಾಗ ಉಭಯ ಪಾರ್ಟಿಗಳ ಸಾಕ್ಷ್ಯಾಧಾರಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಹಾಗೂ ಅವರುಗಳು ಸಲ್ಲಿಸಿದ ವಾದ-ವಿವಾದಗಳನ್ನು ಮತ್ತು ರಕ್ಷಣಾ ಹೇಳಿಕೆಗಳನ್ನು ಹಾಗೂ ದಾಖಲಾತಿಗಳನ್ನು ಗಣನೆಗೆ ತೆಗೆದುಕೊಂಡು ಮತ್ತು ಈ ಪ್ರಕರಣದ ಸಂದರ್ಭ ಸನ್ನಿವೇಶಗಳನ್ನು ಸಹ ಗಮನಿಸಿ ಆಪಾದಿತರಾದ ಶ್ರೀ ಬಿ.ವಿ.ಜಯಂತ್ ಬೋಧಕರು ಇವರ ವಿರುದ್ಧ ಇಲಾಖೆಯು ಹೊರಿಸಿರುವ ಆರೋಪಗಳೆಲ್ಲವೂ ರುಜುವಾತಾಗಿದೆ ಎಂದು ಅಂತಿಮ ವರದಿಯಲ್ಲಿ ತಿಳಿಸಿರುತ್ತಾರೆ.

ವಿಚಾರಣಾ ಅಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿಯಲ್ಲಿನ ಕೆಳಕಂಡ ಅಂಶಗಳು, ದಾಖಲಾತಿಗಳನ್ನು ಪರಿಶೀಲಿಸಿ ವಿಚಾರಣಾಧಿಕಾರಿಗಳ ತೀರ್ಮಾನವು ಅಂಗೀಕಾರವಾಗಿರುತ್ತವೆ ಮತ್ತು ಆರೋಪಗಳು ರುಜುವಾತಾಗಿರುತ್ತವೆಯೆಂದು ಇಲಾಖೆಯು ಒಪ್ಪಿಕೊಂಡಿರುತ್ತದೆ.

ಅ) ವಿಚಾರಣಾ ವರದಿಯ ಕಂಡಿಕೆ 18. ಈ ರೀತಿ ಆಪಾದಿತರು ಘನತೆವೆತ್ತ ರಾಜ್ಯಪಾಲರಿಗೆ ಲಂಚದ ರೂಪದಲ್ಲಿ ರೂ. 1.00 ಲಕ್ಷ ಗಳ ಚೆಕ್ ನೀಡಿದ ಬಗ್ಗೆ ಅವರು ಒಪ್ಪಿಕೊಂಡಂತೆ ಆಗುತ್ತದೆ ಎಂದು ನನ್ನ ಅಭಿಪ್ರಾಯವಾಗಿರುತ್ತದೆ. ಆಪಾದಿತರು ತನ್ನ ರಕ್ಷಣಾ ಹೇಳಿಕೆಯಲ್ಲಿಯೂ ಸಹ ಚೆಕ್ ಕಳುಹಿಸಿರುವ ಅಂಶವನ್ನು ನಿರಾಕರಿಸಿರುವುದಿಲ್ಲ. ಸಾಕ್ಷಿದಾರರ ಹೇಳಿಕೆ ಅಲ್ಲದೆ, ದಾಖಲಾತಿಗಳು ನಿ.ಪಿ – 2 ಆಪಾದಿತರು ದಿನಾಂಕ: 14.09.2012 ರಂದು ಮೊದಲನೇ ಸಾಕ್ಷಿ ಶ್ರೀ ಬಿ.ಎನ್.ಜಗದೀಶ್, ಅಂದಿನ ಸರ್ಕಾರದ ಉಪಕಾರ್ಯದರ್ಶಿಗಳು (ಉನ್ನತ ಶಿಕ್ಷಣ) ಇವರಿಗೆ ಕಳುಹಿಸಿದ ಪತ್ರದಲ್ಲಿ ಆಪಾದಿತರು ಆತನನ್ನು ಚಿಕ್ಕಮಗಳೂರಿನಿಂದ ಬೀದರ್‌ಗೆ ಕಾನೂನು ಬಾಹಿರವಾಗಿ ವರ್ಗಾವಣೆ ಮಾಡಿದ್ದಾರೆಂದು ಮತ್ತು ಲಂಚ ಕೊಡದೇ ಇದ್ದುದರಿಂದ ಈ ರೀತಿ ವರ್ಗಾವಣೆ ಮಾಡಿರುತ್ತಾರೆಂದು ಆರೋಪಿಸಿರುತ್ತಾರೆ. ನಿ.ಪಿ – 3 ರಂತೆ ಆಪಾದಿತರಾದ ಶ್ರೀ ಜಯಂತ್ ಬಿ.ವಿ, ಬೋಧಕರು, ಇವರು ಘನತೆವೆತ್ತ ರಾಜ್ಯಪಾಲರು, ರಾಜಭವನ, ಬೆಂಗಳೂರು-01 ರವರಿಗೆ ಪತ್ರ ಬರೆದು, ಅದರ ಜೊತೆಯಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಬ್ರಾಂಚ್‌ಗೆ ಸಂಬಂಧಿಸಿದ ರೂ. 1.00 ಲಕ್ಷ ಚೆಕ್ ನಂ. 14092012 ನ್ನು ರಾಜ್ಯಪಾಲರಿಗೆ ಕಳುಹಿಸಿದ್ದು, ಸದರಿ ಹಣವನ್ನು ಶ್ರೀ ಬಿ.ಎನ್.ಜಗದೀಶ್, ಸರ್ಕಾರದ ಅಧೀನ ಕಾರ್ಯದರ್ಶಿಗಳು (ಉನ್ನತ ಶಿಕ್ಷಣ ಇಲಾಖೆ, ತಾಂತ್ರಿಕ) ಇವರಿಗೆ ಗೌರವಪೂರ್ವಕವಾಗಿ ಸಂದಾಯ ಮಾಡಿ, ಕಾನೂನು ಬಾಹಿರವಾಗಿ ಮಾಡಿದ ನನ್ನ ವರ್ಗಾವಣೆಯನ್ನು ರದ್ದುಪಡಿಸುವಂತೆ ನಿರ್ದೇಶನ ನೀಡಬೇಕೆಂದು ತಮ್ಮಲ್ಲಿ ವಿನಂತಿಸಿಕೊಳ್ಳುತ್ತಾರೆ ಮತ್ತು ಸದರಿ ಅಧಿಕಾರಿಯ ವಿರುದ್ಧ ಭ್ರಷ್ಟಾಚಾರ ಕಾನೂನು 1984 ಅಡಿಯಲ್ಲಿ

ಸಿ.ಬಿ.ಐ ತನಿಖೆಗೆ ಒಳಪಡಿಸಬೇಕೆಂದು ಕೋರಿರುತ್ತಾರೆ (ಸದರಿ ಚೆಕ್‌ನ್ನು ನಿ.ಪಿ 0 4 ಎಂದು ಗುರುತಿಸಿದೆ) ಈ ದಾಖಲಾತಿಗಳನ್ನು ಅಂದರೆ ನಿ.ಪಿ – 2, ನಿ.ಇ – 3, ನಿ.ಪಿ – 4 ಮತ್ತು ಇಲಾಖಾ ಪರ ಸಾಕ್ಷಿದಾರರ ಹೇಳಿಕೆ (ಪಿಡಬ್ಲ್ಯೂ – 1 ರಿಂದ ಪಿಡಬ್ಲ್ಯೂ – 4) ಗಳನ್ನು ಪರಿಶೀಲಿಸಲಾಗಿ, ನನ್ನ ಅಭಿಪ್ರಾಯದಲ್ಲಿ ಆಪಾದಿತರು ಘನತೆವೆತ್ತ ರಾಜ್ಯಪಾಲರಿಗೆ ಪತ್ರ ಬರೆದು, ರಾಜ್ಯಪಾಲರ ಹೆಸರಿಗೆ ಲಂಚದ ರೂಪವಾಗಿ ರೂ. 1.00 ಲಕ್ಷ ಗಳ ಚೆಕ್‌ನ್ನು ಬರೆದು, ಅದನ್ನು ಸರ್ಕಾರದ ಅಧೀನ ಕಾರ್ಯದರ್ಶಿಯವರಿಗೆ ಸಂದಾಯ ಮಾಡಿ, ಕಾನೂನು ಬಾಹಿರವಾಗಿ ಮಾಡಿದ ತನ್ನ ವರ್ಗಾವಣೆಯನ್ನು ರದ್ದುಪಡಿಸುವಂತೆ ನಿರ್ದೇಶನ ನೀಡಬೇಕೆಂದು ಮಾಡಿರುವ ಕರ್ತವ್ಯವು ನಿಸ್ಸಂದೇಹವಾಗಿ ರುಜುವಾತಾಗಿದೆ ಎಂಬುದಾಗಿದೆ. ಮತ್ತು ನಾನು ಮೊದಲೇ ಹೇಳಿದಂತೆ ಆಪಾದಿತರು ಈ ರೀತಿ ಘನತೆವೆತ್ತ ರಾಜ್ಯಪಾಲರಿಗೆ ಚೆಕ್ ಕಳುಹಿಸಿರುವ ಅಂಶಗಳನ್ನು ಒಪ್ಪಿಕೊಂಡಿರುತ್ತಾರೆ. ಆದುದರಿಂದ ನನ್ನ ಅಭಿಪ್ರಾಯದಲ್ಲಿ ಆ ರೀತಿ ಒಪ್ಪಿಕೊಂಡ ಅಂಶಗಳನ್ನು ಕಾನೂನು ದೃಷ್ಟಿಯಲ್ಲಿ ರುಜುವಾತು ಪಡಿಸುವಂತಿಲ್ಲ. (Admitted facts need not be approved).

ಆ) ವಿಚಾರಣಾ ವರದಿಯ ಕಂಡಿಕೆ– 22 ಮತ್ತು 23– ಆಪಾದಿತರ ರಕ್ಷಣಾ ಹೇಳಿಕೆಗೆ ವಿರುದ್ಧವಾಗಿ ಇಲಾಖಾ ಪರ ಮಂಡನಾಧಿಕಾರಿಗಳು ತನ್ನ ಲಿಖಿತ ವಾದದಲ್ಲಿ ಆಪಾದಿತರು ದಿನಾಂಕ: 14.07.2011 ರಂದು ಅವರ ವರ್ಗಾವಣೆಯನ್ನು ರದ್ದು ಮಾಡಲು ಘನತೆವೆತ್ತ ರಾಜ್ಯಪಾಲರಿಗೆ ರೂ. 1.00 ಲಕ್ಷದ ಚೆಕ್‌ನ್ನು ಲಂಚದ ರೂಪವಾಗಿ ನೀಡಿರುವುದು, ಅವರು ಒಬ್ಬ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966 ನಿಯಮ 3 (i) (ii) (iii) ನ್ನು ಉಲ್ಲಂಘನೆ ಮಾಡಿರುತ್ತಾರೆ. ಮತ್ತು ಪ್ರಾವಿಷನ್ ಆಫ್ ಕರಪ್ಷನ್ ಆಕ್ಟ್ 1980 ರ ಅಧ್ಯಾಯ–3 (12) ರ ಪ್ರಕಾರ ಶಿಕ್ಷಾರ್ಹ ಅಪರಾದವಾಗಿರುತ್ತದೆ. ಆಪಾದಿತರು ತನ್ನ ರಕ್ಷಣಾ ಹೇಳಿಕೆಯಲ್ಲಿ ಅವರ ವರ್ಗಾವಣೆ ಕಾನೂನು ಬಾಹಿರವಾಗಿದೆ ಎಂದು ಇತ್ಯಾದಿ ವಿಷಯಗಳು ಪ್ರಕರಣಕ್ಕೆ ಅಸಂಬಂಧವಾಗಿವೆ. ಆದರೆ ಆಪಾದಿತರು ಈ ಪ್ರಕರಣದ ಬಗ್ಗೆ ಪತ್ರಗಳಲ್ಲಿ ಹೇಳಿಕೆ ನೀಡಿರುವುದು ಮತ್ತು ಟಿವಿ–9 ಚಾನಲ್ ಕಾರ್ಯಕ್ರಮದಲ್ಲಿ ಇಲಾಖಾ ಅನುಮತಿ ಇಲ್ಲದೆ ಭಾಗವಹಿಸಿ ಮೇಲಾಧಿಕಾರಿಗಳು ಮತ್ತು ಸರ್ಕಾರದ ವಿರುದ್ಧ ಟೀಕೆ ಮಾಡಿರುವುದು ಇದು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮ 1966 ರ ನಿಯಮ 10 ರ ಪ್ರಕಾರ ಅಪರಾದವಾಗಿರುತ್ತದೆ ಎಂಬ ವಾದವನ್ನು ಮಂಡಿಸುತ್ತಾ, ಸಾಕ್ಷಿದಾರರ ಹೇಳಿಕೆಗಳು ಮತ್ತು ದಾಖಲಾತಿಗಳ ಪ್ರಕಾರ ಆಪಾದಿತರು ಆರೋಪ ಎಸಗಿರುವುದು ರುಜುವಾತಾಗಿದೆ ಎಂದು ವಾದವನ್ನು ಮಂಡಿಸಿರುತ್ತಾರೆ.

ಉಭಯ ಪಾರ್ಟಿಗಳ ವಾದವನ್ನು ಪರಿಶೀಲಿಸಿ, ನನ್ನ ಅಭಿಪ್ರಾಯದಲ್ಲಿ ಮಂಡನಾಧಿಕಾರಿಯವರ ವಾದವನ್ನು ಒಪ್ಪುವಂತಾಗಿದೆ. ಆಪಾದಿತರು ಹೇಳಿಕೆ ಅಂದರೆ ಮೊದಲನೇ ಸಾಕ್ಷಿ ಶ್ರೀ ಬಿ.ಎನ್.ಜಗದೀಶ್, 3ನೇ ಸಾಕ್ಷಿ ಶ್ರೀ ಪಿ.ಎಸ್.ಚಂದ್ರಶೇಖರ ರಾವ್ ಮತ್ತು 2ನೇ ಸಾಕ್ಷಿ ಶ್ರೀ ವೆಂಕಟಸ್ವಾಮಿ ಇವರುಗಳು ಸುಳ್ಳು ಸಾಕ್ಷಿ ನುಡಿದಿರುತ್ತಾರೆ ಮತ್ತು ಸುಳ್ಳು ದಾಖಲೆ ಹಾಜರು ಪಡಿಸಿರುತ್ತಾರೆ ಎಂಬ ಅವರ ಹೇಳಿಕೆಯನ್ನು ಯಾವ ಕಾರಣಕ್ಕೂ ಒಪ್ಪಲು ಸಾಧ್ಯವಿಲ್ಲ. ಮೊದಲನೆಯ ಸಾಕ್ಷಿದಾರರ ಹೇಳಿಕೆಯು ಮತ್ತು ಪ್ರಧಾನ ಕಾರ್ಯದರ್ಶಿಯವರು ಘನತೆವೆತ್ತ ರಾಜ್ಯಪಾಲರ ಕಾರ್ಯದರ್ಶಿಯವರಿಗೆ ಬರೆದ ಪತ್ರ ನಿ.ಪಿ – 6 ಇವುಗಳಲ್ಲಿ 1ನೇ ಸಾಕ್ಷಿದಾರರು ವರ್ಗಾವಣೆ ಆದೇಶಕ್ಕೆ ಸರ್ಕಾರದ ಅನುಮತಿ, ಉನ್ನತ ಶಿಕ್ಷಣ ಸಚಿವರ ಅನುಮತಿ ಮತ್ತು ಮಾನ್ಯ ಮುಖ್ಯಮಂತ್ರಿಗಳ ಅನುಮೋದನೆ ಇವೆಲ್ಲವನ್ನೂ ಪಡೆದು ನಿಯಮಾನುಸಾರ ಮಾಡಿರುವ ಸಾರ್ವತ್ರಿಕ ವರ್ಗಾವಣೆ (ನಿ.ಪಿ – 5 ಪ್ರಕಾರ) ವರ್ಗಾವಣೆ ಪಟ್ಟಿ ಆದ ನಂತರ ಮೊದಲನೆ ಸಾಕ್ಷಿ ಅಧೀನ ಕಾರ್ಯದರ್ಶಿಯಾಗಿದ್ದು, ಕೇವಲ ಆದೇಶಗಳಿಗೆ ಸಹಿ ಮಾಡಿರುತ್ತಾರೆ ಹೊರತು, ಅವರು ಸ್ವತಃ ವರ್ಗಾವಣೆಯಲ್ಲಿ ಇವರ ಪಾತ್ರ ಇರುವುದಿಲ್ಲ. ಶ್ರೀ ಬಿ.ಎನ್.ಜಗದೀಶ್‌ರವರು ವರ್ಗಾವಣೆ ಆದೇಶಕ್ಕೆ ಮೇಲಾಧಿಕಾರಿಗಳಿಂದ ಆದೇಶವಾದ ನಂತರ, ಕರ್ನಾಟಕ ಸರ್ಕಾರ ಸಚಿವಾಲಯದ ಕೈಪಿಡಿ 2005 ರ ಪ್ಯಾರಾ 36 ಹಾಗೂ ಕರ್ನಾಟಕ ಸರ್ಕಾರದ (ಕಾರ್ಯ ಕಲಾಪಗಳ ನಿರ್ವಹಣೆ) ಟ್ರಾನ್ಸಾಕ್ಷನ್ ಬಿಜಿನೆಸ್ ರೂಲ್ 1977 ರ ನಿಯಮ 19 ರಡಿ ಅವರು ವರ್ಗಾವಣೆ ಆದೇಶಕ್ಕೆ ಸಹಿ ಮಾಡಿ, ಅದನ್ನು ಅದೇ ದಿನ ಮೇಲಾಧಿಕಾರಿಗಳ ಆದೇಶದ ಪ್ರಕಾರ ನಿರ್ದೇಶಕರಿಗೆ ರವಾನೆ ಮಾಡಿರುತ್ತಾರೆ ಮತ್ತು ವರ್ಗಾವಣೆ ಆದೇಶವನ್ನು ಬಿಡುಗಡೆ ಮಾಡಿರುತ್ತಾರೆ. ಆದರೆ, ಆಪಾದಿತರ ಆರೋಪವೇನೆಂದರೆ, ಶ್ರೀ ಬಿ.ಎನ್.ಜಗದೀಶ್‌ರವರೇ ಆಪಾದಿತರನ್ನು ಕಾನೂನು ಬಾಹಿರವಾಗಿ ವರ್ಗಾವಣೆ ಮಾಡಿರುತ್ತಾರೆಂಬ ಅವರ ಹೇಳಿಕೆಯಲ್ಲಿ ಯಾವ ತಿರುಳು ಇರುವುದಿಲ್ಲ ಎಂಬುದು ನನ್ನ ಅಭಿಪ್ರಾಯವಾಗಿದೆ. ಆಪಾದಿತರು ಅವರ ವರ್ಗಾವಣೆಯ ಪ್ರಕ್ರಿಯೆ ಯಾವ ರೀತಿ ಹೊರಡಿಸಿದ್ದಾರೆಂಬುದನ್ನು ಪರಿಶೀಲಿಸದೇ ವಿನಾಕಾರಣ ಶ್ರೀ ಜಗದೀಶ್‌ರವರ ವಿರುದ್ಧ ಮಾಡಿರುವ ಆರೋಪಗಳು ನನ್ನ ಅಭಿಪ್ರಾಯದಲ್ಲಿ ಆಪಾದಿತರು ಒಬ್ಬ ಸರ್ಕಾರಿ ನೌಕರರಲ್ಲದ ರೀತಿಯಲ್ಲಿ ವರ್ತಿಸಿ, ದುರ್ನಡತೆ ಎಸಗಿದ್ದಾರೆಂದು ನನ್ನ ಸ್ಪಷ್ಟ ಅಭಿಪ್ರಾಯವಾಗಿದೆ. ಅಲ್ಲದೇ ಸಾರ್ವತ್ರಿಕ ವರ್ಗಾವಣೆಯಲ್ಲಿ ಆಪಾದಿತರು ಒಬ್ಬರನ್ನೇ ವರ್ಗಾವಣೆ ಮಾಡಿರುವುದಿಲ್ಲ, ವರ್ಗಾವಣೆ ಪಟ್ಟಿಯಲ್ಲಿ (ನಿ.ಪಿ – 5 ರಲ್ಲಿ) ಒಟ್ಟು ಅವರನ್ನು ಸೇರಿ 119 ಜನ ಬೋಧಕರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ವರ್ಗಾವಣೆ ಮಾಡಿರುತ್ತಾರೆ. ಆ ರೀತಿ ವರ್ಗಾವಣೆ ಮಾಡಿ ಒಂದುವರೆ ತಿಂಗಳ ನಂತರ ಆಪಾದಿತರು ಘನತೆವೆತ್ತ ರಾಜ್ಯಪಾಲರಿಗೆ ಪತ್ರ ಬರೆದು ರೂ. 1.00 ಲಕ್ಷದ ಚೆಕ್‌ನ್ನು ಲಂಚದ ರೂಪದಲ್ಲಿ ನೀಡಿರುವುದು ನನ್ನ ಅಭಿಪ್ರಾಯದಲ್ಲಿ ಅವರು ಒಬ್ಬ ಸರ್ಕಾರಿ ನೌಕರರಲ್ಲದ ರೀತಿಯಲ್ಲಿ ವರ್ತಿಸಿರುವುದು ಕಂಡುಬರುತ್ತದೆ. ಈ ಪ್ರಕರಣದಲ್ಲಿ ದಾಖಲಾತಿಗಳಿಂದ ಕಂಡು ಬರುವುದೇನೆಂದರೆ, ಸಾರ್ವತ್ರಿಕ ವರ್ಗಾವಣೆಯಲ್ಲಿ ಆಪಾದಿತರನ್ನು ಸರ್ಕಾರಿ ಬಿ.ಎ.ಸಿ.ಜಿ ಪಾಲಿಟೆಕ್ನಿಕ್, ಚಿಕ್ಕಮಗಳೂರಿನಿಂದ ಸರ್ಕಾರಿ ಪಾಲಿಟೆಕ್ನಿಕ್, ಬೀದರ್ ಇಲ್ಲಿನ ಖಾಲಿ ಹುದ್ದೆಗೆ ವರ್ಗಾವಣೆ ಮಾಡಿರುತ್ತಾರೆ. ಆದುದರಿಂದ ಅವರು ನನ್ನನ್ನು ಒಬ್ಬನನ್ನೇ ಬಲಿಪಶು ಮಾಡಿ ದೂರದ ಜಿಲ್ಲೆಯಾದ ಬೀದರ್‌ಗೆ ವರ್ಗಾವಣೆ ಮಾಡಿರುತ್ತಾರೆ ಎಂದು ಅವರು ಸುಳ್ಳು ಆರೋಪ ಮಾಡಿರುವುದು ಕಂಡುಬರುತ್ತದೆ. ಆಪಾದಿತರು ಅವರ ವರ್ಗಾವಣೆ ಆದೇಶವನ್ನು ಕೆ.ಎ.ಟಿ ಬೆಂಗಳೂರಿನಲ್ಲಿ ಅರ್ಜಿ ಸಂಖ್ಯೆ: 4901:2011 ರಲ್ಲಿ ಛಾಲೇಜ್ ಮಾಡಿದ ನಂತರ ಟ್ರಿಬುನಲ್‌ನವರು ದಿನಾಂಕ: 30.01.2012 ರಂದು ಆತನನ್ನು ಹತ್ತಿರದ ಕಾಲೇಜಿಗೆ ಹಾಕುವ ವಿಷಯವನ್ನು ಪರಿಶೀಲಿಸಿ ಎಂದು ನೀಡಿದ ಆದೇಶದ ಮೇರೆಗೆ ಆತನನ್ನು ಶ್ರೀಮತಿ ವಿ.ಎಲ್. ಸರ್ಕಾರಿ ಪಾಲಿಟೆಕ್ನಿಕ್, ಹಾಸನ ಇಲ್ಲಿಗೆ ವರ್ಗಾಯಿಸಲಾಯಿತು. ಈ ರೀತಿ ಆಗಿದ್ದರೂ ಸಹ ಆಪಾದಿತರು ಘನತೆವೆತ್ತ ರಾಜ್ಯಪಾಲರಿಗೆ ಲಂಚದ ರೂಪದಲ್ಲಿ ರೂ. 1.00 ಲಕ್ಷದ ಚೆಕ್‌ನ್ನು ಕಳುಹಿಸಿ ವರ್ಗಾವಣೆಯನ್ನು ರದ್ದು ಮಾಡಲು ಕೋರಿರುವುದು ನನ್ನ ಅಭಿಪ್ರಾಯದಲ್ಲಿ ಅವರು ದುರ್ನಡತೆಯನ್ನು (Misconduct) ಎಸಗಿರುತ್ತಾರೆಂಬುದಾಗಿದೆ.

ಇ) ವಿಚಾರಣಾ ವರದಿಯ ಕಂಡಿಕೆ 24– ಆಪಾದಿತರು ತನ್ನ ಲಿಖಿತ ರಕ್ಷಣಾ ಹೇಳಿಕೆಯಲ್ಲಿ ಪ್ಯಾರಾ–16 ರಲ್ಲಿ ನಾನು 13 ಬಾರಿ ಘನತೆವೆತ್ತ ರಾಜ್ಯಪಾಲರಿಗೆ, 65 ಬಾರಿ ಸರ್ಕಾರದ ವಿವಿಧ ಅಧಿಕಾರಿಗಳಿಗೆ ದೂರು ಸಲ್ಲಿಸಿದ್ದೇನೆ. ಆದರೆ ಫಲಿತಾಂಶವು ಶೂನ್ಯ ಎಂದು ಆರೋಪಿಸಿರುತ್ತಾರೆ. ಇದರ ಬಗ್ಗೆ ನಿ.ಪಿ – 16 ನ್ನು ಆಪಾದಿತರು ದಿನಾಂಕ: 09.06.2009 ರಂದು ನಿರ್ದೇಶಕರಿಗೆ ಪ್ರಾಚಾರ್ಯರ ಮೂಲಕ ಬರೆದಿರುವ ಪತ್ರ, ನಿ.ಪಿ – 17, ದಿನಾಂಕ: 01.05.2009 ರಂದು ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆಗೆ ಬರೆದಿರುವ ಪತ್ರ, ನಿ.ಪಿ – 18, ದಿನಾಂಕ: 31.01.2008 ರಂದು ಕಾರ್ಯದರ್ಶಿಗಳು, ಕಾನೂನು ನ್ಯಾಯ ಹಾಗೂ ಮಾನವ ಹಕ್ಕುಗಳ ಇಲಾಖೆ, ವಿಧಾನ ಸೌಧ, ಇವರಿಗೆ ಬರೆದ ಪತ್ರ, ದಿನಾಂಕ: 21.02.2008 ರಂದು ನಿರ್ದೇಶಕರಿಗೆ ಬರೆದ ಪತ್ರ, ಆಪಾದಿತರು ದಿನಾಂಕ: 31.03.2008 ರಂದು ಭ್ರಷ್ಟಾಚಾರ ಅಧಿಕಾರಿಗಳ ವಿರುದ್ಧ ತನಿಖೆ ನಡೆಸಲು ಕರ್ನಾಟಕ ಲೋಕಾಯುಕ್ತರು ಇವರಿಗೆ ಪತ್ರ ಬರೆದು ಮತ್ತು

ದಿನಾಂಕ: 31.03.2008 ರಂದು ಘನತೆವೆತ್ತ ರಾಜ್ಯಪಾಲರ ಕಾನೂನು ಸಲಹೆಗಾರರು, ರಾಜಭವನ ಬೆಂಗಳೂರು ಇವರಿಗೆ ಬರೆದ ಪತ್ರ, ನಿ.ಪಿ – 20 ದಿನಾಂಕ: 11.04.2008 ರಂದು ಕಾರ್ಯದರ್ಶಿಗಳು, ತಾಂತ್ರಿಕ ಪರೀಕ್ಷಾ ಮಂಡಳಿ, ಅರಮನೆ ರಸ್ತೆ, ಇವರಿಗೆ ಬರೆದ ಪತ್ರಗಳು ನಿ.ಪಿ – 21, ದಿನಾಂಕ: 28.05.2011 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ಮೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕಟ್ಟಡ, ಬೆಂಗಳೂರು – 2 ರವರಿಗೆ ಬರೆದ ಪತ್ರವಾಗಿರುತ್ತದೆ. ಈ ಎಲ್ಲಾ ಪತ್ರಗಳನ್ನು ಪರಿಶೀಲಿಸಲಾಗಿ ಆಪಾದಿತರು ಕೆಲವು ಅಧಿಕಾರಿಗಳ ವಿರುದ್ಧ ಅಂದರೆ ಶ್ರೀ ಪಿ.ಎಸ್.ಚಂದ್ರಶೇಖರ ರಾವ್, ಸರ್ಕಾರಿ ಪಾಲಿಟೆಕ್ನಿಕ್, ಜೋಯಿಡಾ, ಹೊಸದುರ್ಗ ಪಾಲಿಟೆಕ್ನಿಕ್‌ನ ಪ್ರಾಚಾರ್ಯರಾದ ಶ್ರೀ ಸುನೀಲ, ಹರಪನಹಳ್ಳಿ ಸರ್ಕಾರಿ ಪಾಲಿಟೆಕ್ನಿಕ್‌ನ ಅಂಜಲಿ, ಕೂಡ್ಲಗಿ ಪಾಲಿಟೆಕ್ನಿಕ್‌ನ ಬಸವರಾಜು ಇವರುಗಳ ವಿರುದ್ಧ ಹಾಗೂ ಮೊದಲನೇ ಸಾಕ್ಷಿ ಬಿ.ಎನ್.ಜಗದೀಶ್‌ರವರ ವಿರುದ್ಧ ಸರ್ಕಾರದವರು ಕಾನೂನು ಕ್ರಮ ತೆಗೆದುಕೊಂಡಿರುವುದಿಲ್ಲವೆಂದು, ಈ ರೀತಿ ಉನ್ನತ ಅಧಿಕಾರಿಗಳಿಗೆ ಪತ್ರವನ್ನು ಬರೆದಿದ್ದಾರೆ. ಆದರೆ ಆಪಾದಿತರು ಆರೋಪಿಸಿರುವಂತೆ ಸರ್ಕಾರದವರು ತಪ್ಪು ಮಾಡಿದವರ ವಿರುದ್ಧ ಸರಿಯಾಗಿ ತನಿಖೆ ಕೈಗೊಂಡು, ಮುಂದಿನ ಕ್ರಮ ಜರುಗಿಸುತ್ತಾರೆಯೇ ಹೊರತು, ಈ ರೀತಿ ಆಪಾದಿತರು ಅಧಿಕಾರಿಗಳ ವಿರುದ್ಧ ದೂರುಗಳನ್ನು ನೀಡಿದೊಡನೆ ಸರ್ಕಾರದವರು ಕ್ರಮ ಕೈಗೊಳ್ಳಬೇಕೆಂದು ಯಾವ ನಿಯಮವಿರುವುದಿಲ್ಲ. ಮತ್ತು ಆಪಾದಿತರು ಅಧಿಕಾರಿಗಳ ವಿರುದ್ಧ ಕ್ರಮ ತೆಗೆದುಕೊಳ್ಳಲಿ ಎಂದು ಸರ್ಕಾರಕ್ಕೆ ನಿರ್ಭಂದ ಏರುವ ಅಧಿಕಾರ ಅವರಿಗೆ ಇರುವುದಿಲ್ಲ. ತಪ್ಪು ಮಾಡಿದ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಸರ್ಕಾರದವರು ಪರಮಾಧಿಕಾರವನ್ನು ಹೊಂದಿರುತ್ತಾರೆ. ಆದುದರಿಂದ ನನ್ನ ಅಭಿಪ್ರಾಯದಲ್ಲಿ ಆಪಾದಿತರು, ಅವರು ಹೇಳಿದ ಅಧಿಕಾರಿಗಳ ವಿರುದ್ಧ ಕ್ರಮ ಜರುಗಿಸಿಲ್ಲವೆಂದು ಆಪಾದಿಸಿರುವುದು ಸರಿಯಲ್ಲವೆಂದು ಕಂಡುಬರುತ್ತದೆ. ಈ ರೀತಿಯಾಗಿ ಆಪಾದಿತರು ವಿನಾಕಾರಣ ಆಧಾರ ರಹಿತ ಆರೋಪಗಳನ್ನು ಮೇಲ್ಕಂಡ ಅಧಿಕಾರಿ, ನಿರ್ದೇಶಕರು, ಸಿಬ್ಬಂದಿ ವರ್ಗದವರ ವಿರುದ್ಧ ಆರೋಪಗಳು ಮಾಡಿರುವುದು ಕಂಡು ಬರುತ್ತದೆ. ಇದು ಸಹ ಅವರ ದುರ್ನಡತೆಯಾಗಿರುತ್ತದೆಂದು ನನ್ನ ಅಭಿಪ್ರಾಯವಾಗಿದೆ. ಅಲ್ಲದೇ ಆಪಾದಿತರು ಪತ್ರಿಕಾ ಪ್ರಕಟಣೆ (ವಿಜಯವಾಣಿ ದಿನಪತ್ರಿಕೆ ದಿನಾಂಕ: 13.10.2012) ರಂದು ತಾನು ಘನತೆವೆತ್ತ ರಾಜ್ಯಪಾಲರಿಗೆ ರೂ. 1.00 ಲಕ್ಷಗಳು ನೀಡಿರುವುದನ್ನು ಸಮರ್ಥಿಸಿಕೊಂಡಿರುವುದನ್ನು (ದಿನಪತ್ರಿಕೆಯ ನಕಲು ನಿ.ಪಿ – 13 ಎಂದು ಗುರುತಿಸಿದೆ) ಇದು ನನ್ನ ಅಭಿಪ್ರಾಯದಲ್ಲಿ ಅವರು ಕರ್ನಾಟಕ ಸಿವಿಲ್ ಸರ್ವೀಸ್ (ಕಾಂಡಕ್ಟ್) ರೂಲ್ಸ್ 1966 ರ ನಿಯಮ 10 ನ್ನು ಸ್ಪಷ್ಟವಾಗಿ ಉಲ್ಲಂಘಿಸಿದಂತೆ ಆಗುತ್ತದೆ. ಕಾರಣ, ಅವರು ಸರ್ಕಾರದ ಅನುಮತಿಯನ್ನು ಪಡೆಯದೆ ಈ ರೀತಿ ಮಾಧ್ಯಮಗಳಲ್ಲಿ ಹಾಗೂ ಟಿವಿ–9ಚಾನಲ್‌ನಲ್ಲಿ ಪ್ರಸಾರ ಕಾರ್ಯಕ್ರಮ ದಿನಾಂಕ: 29.10.2012 ರ ಮಧ್ಯಾಹ್ನ 2.00 ಗಂಟೆಗೆ ಸದರಿ ಚಾನಲ್‌ನಲ್ಲಿ ಪ್ರಸಾರವಾದ ಕಾರ್ಯಕ್ರಮದಲ್ಲಿ ಮೇಲಾಧಿಕಾರಿಗಳು ಹಾಗೂ ಸರ್ಕಾರದ ವಿರುದ್ಧ ಟೀಕೆ ಮತ್ತು ಹೇಳಿಕೆಗಳನ್ನು ನೀಡಿರುವುದು ಸಹ ನನ್ನ ಅಭಿಪ್ರಾಯದಲ್ಲಿ ಅವರ ದುರ್ನಡತೆಯ ಪರಮಾವಧಿಯನ್ನು ಎತ್ತಿ ತೋರಿಸುತ್ತದೆಂಬುದಾಗಿದೆ.

ಈ) ವಿಚಾರಣಾ ವರದಿಯ ಕಂಡಿಕೆ 25– ಅಲ್ಲದೆ ಆಪಾದಿತರು ಘನತೆವೆತ್ತ ಮಾನ್ಯ ರಾಜ್ಯಪಾಲರಿಗೆ ಚೆಕ್ ರೂಪದಲ್ಲಿ ಲಂಚ ನೀಡಿದ ಪ್ರಕರಣವು ದಿನಪತ್ರಿಕೆಗಳಾದ ಪ್ರಜಾವಾಣಿ ನಿ.ಪಿ – 11 (ಪೇಪರ್ ಕಟಿಂಗ್) ನಿ.ಪಿ – 12 ವಿಜಯವಾಣಿ, ನಿ.ಪಿ – 13 ಕನ್ನಡಪ್ರಭ, ನಿ.ಪಿ – 14 ವಿಜಯ ಕರ್ನಾಟಕ ಇವುಗಳಲ್ಲಿ ಪ್ರಕಟಣೆಯಾಗಿರುತ್ತದೆ. ಈ ರೀತಿ ಆಪಾದಿತರು ಸರ್ಕಾರದ ನೀತಿ ನಿಯಮಗಳನ್ನು ಕಲುಷಿತಗೊಳಿಸಿ ಸರ್ಕಾರದ ನೀತಿ ನಿಯಮಗಳನ್ನು ಟೀಕೆ ಮಾಡುವ ಪ್ರವೃತ್ತಿವುಳ್ಳವರು ಆಗಿದ್ದಾರೆಂದು ನನ್ನ ಸ್ಪಷ್ಟ ಅಭಿಪ್ರಾಯವಾಗಿದೆ. ನಾನು ಮೇಲೆ ಹೇಳಿದ ಎಲ್ಲಾ ಕಾರಣಗಳಿಂದಾಗಿ ಆಪಾದಿತರು ಆರೋಪಣಾ ಪಟ್ಟಿಯಲ್ಲಿ ಆರೋಪಿಸಿರುವಂತೆ ಅವರು ದುರ್ನಡತೆ ಎಸಗಿರುವುದು ಸಾಬೀತಾಗಿರುತ್ತದೆ.

At this juncture, it is relevant to extract the provision of Section 107 IPC, which defines the offence of Abetment as under :-

A person abets the doing of a thing, who:

First – Instigate any person to do that thing; or

Secondly – Engages with one or more other person persons in any conspiracy for the doing of that thing. If any act or illegal omission takes place in pursuance of that conspiracy, and in order to the doing of that thing: of

Thirdly – Intentionally aids, by any at or illegal omission, the doing of that thing.

So in view of the above definition of abetment in my opinion, since admittedly, the delinquent has intentionally sent a cheque of Rs. 1,00,000/- to Honorable Governor with a request to hand over the said amount to Sri. B.N. JAGADISH, the then under secretary to Higher Education, as Bribe, to cancel his transfer order clearly amount¸À to aiding the offence of Corrupt Practice, under the said section Intention to aid the commission of offence is the gist of offence of abetment by aid (AIR 1977 SC 666. Trilok chand V. State of Delhi.)

Further, Chapter-3, Section 12 of the prevention of Corruption act 1988 which needs as follows:

12, Punishment for abetment of offences defined in section 7 or 11.

“Whoever abets any offence punishable under section 7 or section 11 whether or not that offence is committed in consequence of that abetment, shall be punishable with imprisonment for a term, which shall be not less than six months but which may extend to five years and shall also be liable to fine.”

Thus, the above said provisions prescribe punishment of 6 months imprisonment which shall be extended to five years and shall also be liable to fine.

In this present case on hand, having regard to the conduct of delinquent, in sending cheque as a Bribe to the Hon'ble Governor, in my opinion, falls within the preview of offence of abetment. Because giving cheque for Rs. 1,00,000/- as bribe amounts to aiding or encouraging corruption which is illegal practice.

Further, as evidence both oral and documentary disclose that the delinquent has attributed ulterior motive on the part of Sri. B.N. JAGADISH, even though these is nothing to show that the said under secretary demanded bribe, from the delinquent to show official favour. Therefore, the said act of delinquent in sending cheque, in my opinion, amount to Gross misconduct. This view of mine gains support by a decision of Karnataka High Court, which is reported in 1995, L.L.R. P.940 (Kar) (Jyothi Home Industries v/s presiding Officer, Labour Court, In which, the word Misconduct has been defined as follows:

Misconduct literally means wrong or improper conduct. It means intentional wrong doing. It would include unlawful behavior. A conduct which is blameworthy would be misconduct. If by the commission or omission of the act of the employees, the employer suffers loss or it generates as atmosphere destructive of discipline, the same is misconduct.

The above decision in my opinion, clearly applies to facts and circumstances of the case on hand.

The delinquent in his defence Statement has stated that inspite of his several letters to Government, no action has been taken against the concerned officials. In this regard, I am of the view that if at all he has aggrieved by the any order of the Government, or of the Director, Technical Education, he should have taken recourse to the legal action. This is to say he should have ventelated his grievance in a proper forum. Instead, he has indulged in writing No. of letters to higher officers, the Governor, and the Director.

This conduct of delinquent, in my opinion deserves condemnation. Because, he cannot also compel government to initiate action against the persons named by him at his WHIMS and FANCIES. Because, it is the prerogative of the government to take action against erred employee, but he cannot detect terms to the Government to do a particular job.

Before concluding, after careful assessment of the oral and documentary evidence of the both parties, I am of the clear opinion that the delinquent has violated the provision of rule 10 of the Karnataka Civil Service Rules 1966 and also committed rules 3 sub rule 1 (i) (ii) (iii) of the said act and also he has intentionally committed the said offence of abetment "u/s 107 of IPC and his conduct also attracts penal provision of Chapter, 3 of S-12, Prevention of Corruption 1988.

ಕೊನೆಯದಾಗಿ, ಉಭಯ ಪಾರ್ಟಿಗಳ ಸಾಕ್ಷ್ಯಾಧಾರಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಹಾಗೂ ಅವರುಗಳು ಸಲ್ಲಿಸಿದ ವಾದ ವಿವಾದಗಳನ್ನು ಮತ್ತು ರಕ್ಷಣಾ ಹೇಳಿಕೆಗಳನ್ನು ಗಣನೆಗೆ ತೆಗೆದುಕೊಂಡು ಮತ್ತು ಈ ಪ್ರಕರಣದ ಸಂದರ್ಭ ಸನ್ನಿವೇಶಗಳನ್ನು ಸಹ ಗಮನಿಸಿ ನನ್ನ ಅಭಿಪ್ರಾಯದಲ್ಲಿ ಆಪಾದಿತರಾದ ಶ್ರೀ ಬಿ.ವಿ.ಜಯಂತ್, ಬೋಧಕರು ಇವರ ವಿರುದ್ಧ ಹೊರಿಸಿರುವ ಆರೋಪಗಳೆಲ್ಲವೂ ರುಜುವಾತಾಗಿದೆ ಎಂದು ತೀರ್ಮಾನಿಸಿ ಈ ಅಂತಿಮ ವರದಿಯನ್ನು ಸಲ್ಲಿಸಲಾಗಿದೆ" ಎಂದು ವಿಚಾರಣಾಧಿಕಾರಿಗಳು ದಾಖಲಿಸಿರುತ್ತಾರೆ.

ಸದರಿಯವರಿಗೆ ನೀಡಲಾಗಿದ್ದ ಕಾಲಾವಕಾಶ ಪೂರ್ಣಗೊಂಡಿದ್ದು, ಯಾವುದೇ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿರುವುದಿಲ್ಲ. ವಿಚಾರಣಾ ವರದಿಯಲ್ಲಿ ಸದರಿಯವರ ವಿರುದ್ಧ ಹೊರಿಸಲಾದ ಆರೋಪಗಳು ರುಜುವಾತಾಗಿದೆಯೆಂದು ನೀಡಿದ್ದ ವರದಿಯನ್ನು ಅಂಗೀಕರಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ನಿರ್ದೇಶಕರ ಆದೇಶ ಸಂಖ್ಯೆ: ಡಿಟಿಇ 08 ಡಿಇಕ್ಯೂ(1) 2011, ಬೆಂಗಳೂರು ದಿನಾಂಕ: 25ನೇ ಫೆಬ್ರವರಿ 2014.**

ಪ್ರಸ್ತಾವನೆಯಲ್ಲಿ ವಿವರಿಸಲಾಗಿರುವ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಾವಳಿ 1957ರ ನಿಯಮ 8(viii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀಮತಿ ಎಲ್.ವಿ.ಸರ್ಕಾರಿ ಪಾಲಿಟೆಕ್ನಿಕ್, ಹಾಸನ, ಇಲ್ಲಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಬಿ.ವಿ.ಜಯಂತ್, ಬೋಧಕರು (ಹಾಲಿ ಅಮಾನತ್ತಿನಲ್ಲಿರುವ), ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ **ಸರ್ಕಾರಿ ಸೇವೆಯಿಂದ ವಜಾಗೊಳಿಸಲಾಗಿದೆ.**

**ನಿರ್ದೇಶಕರು**
ಹಾಗೂ ನೇಮಕಾತಿ ಮತ್ತು ಶಿಸ್ತು ಪ್ರಾಧಿಕಾರ
ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು

**PR-149**
**SC-10**

## ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

### ತಿದ್ದುಪಡಿ ಅಧಿಸೂಚನೆ

**ಸಂ. ಜಿಶಿ/ಕ್ರಷರ್/ಅಧಿಸೂಚನೆ /2013-14/2818 ದಿನಾಂಕ :18.02.2014.**

ಶಿವಮೊಗ್ಗ ಜಿಲ್ಲೆ, ಸೊರಬ ತಾಲ್ಲೂಕಿನ ಬಲವಂತನಕೊಪ್ಪ ಹಾಗೂ ಕುಣೇತೆಪ್ಪ ಗ್ರಾಮಗಳ ವ್ಯಾಪ್ತಿಯಲ್ಲಿ ಕರ್ನಾಟಕ ಕಲ್ಲುಪುಡಿ ಮಾಡುವ ಘಟಕಗಳ ( ಕ್ರಷರ್‌ಗಳ) ನಿಯಂತ್ರಣ ಕಾಯ್ದೆ ಹಾಗೂ ನಿಯಮಾವಳಿ 2012 ರಂತೆ ದಿನಾಂಕ:01.11.2012 ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಭಾಗ-3 - ಪಿಆರ್ ಸಂ:1382 ರಲ್ಲಿ ಪ್ರಕಟಗೊಂಡ ಅಧಿಸೂಚನೆಯಲ್ಲಿ ಈ ಮೇಲ್ಕಂಡ ಗ್ರಾಮಗಳ ಸರ್ವೆ ಸಂ:100, 102, 103, 68 ಮತ್ತು 92 ಎಂದು ನಮೂದಾಗಿದ್ದು, ಕಣ್- ತಪ್ಪಿನಿಂದಾಗಿ ಸರ್ವೆ ಸಂ:102, 103 ಮತ್ತು 92 ಅಧಿಸೂಚನೆಗೊಂಡಿದ್ದು, ದಿನಾಂಕ:30.01.2014 ರ ಸಭೆಯ ತೀರ್ಮಾನದಂತೆ ಬಲವಂತನಕೊಪ್ಪ & ಕುಣೇತೆಪ್ಪ ಗ್ರಾಮಗಳ ಸರ್ವೆ ಸಂ:100 ಹಾಗೂ 68 ಮಾತ್ರ ಕ್ರಷರ್ ಸುರಕ್ಷಿತ ವಲಯವೆಂದು ತಿದ್ದುಪಡಿ ಆದೇಶ ಹೊರಡಿಸಲಾಗಿದ್ದು, ಉಳಿದ 102, 103 ಮತ್ತು 92 ಸರ್ವೆ ನಂಬರುಗಳ ಪ್ರದೇಶವನ್ನು ಕ್ರಷರ್ ಸುರಕ್ಷಿತ ವಲಯದಿಂದ ಕೈಬಿಡಲಾಗಿದೆ. ಹೆಚ್ಚಿನ ಮಾಹಿತಿಗಾಗಿ **ಹಿರಿಯ ಭೂ ವಿಜ್ಞಾನಿಯವರ ಕಛೇರಿ, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಖನಿಜ ವಿಭಾಗ, ಉಪ ವಿಭಾಗಾಧಿಕಾರಿಗಳ ಕಛೇರಿ, ಬಾಲರಾಜ್ ಅರಸ್ ರಸ್ತೆ , ಶಿವಮೊಗ್ಗ** ಇವರನ್ನು ಸಂಪರ್ಕಿಸಬಹುದು.

**ಜಿಲ್ಲಾಧಿಕಾರಿಗಳು**
**ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.**

**PR-146**

## ಕಂದಾಯ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಕಂಇ 09 ಭೂದಾಸೇ(1) 2013 ಬೆಂಗಳೂರು, ದಿನಾಂಕ: 07-02-2014**

ದಿನಾಂಕ: 20-08-2013ರಲ್ಲಿನ ಸಮಸಂಖ್ಯೆಯ ಅಧಿಸೂಚನೆಯಲ್ಲಿನ ಅನುಬಂಧದಲ್ಲಿನ ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯ ಭೂದಾಖಲೆಗಳ ಜಂಟಿ ನಿರ್ದೇಶಕರು ವೃಂದದ ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿಯ ಪ್ರಸ್ತಾವನೆ ದಿನಾಂಕ: 01-01-2013ರಲ್ಲಿದ್ದಂತೆ ಎಂಬುದರ ಬದಲಾಗಿ "ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯ ಭೂದಾಖಲೆಗಳ ಜಂಟಿ ನಿರ್ದೇಶಕರು ವೃಂದದ ಅಂತಿಮ ಜ್ಯೇಷ್ಠತಾ ಪಟ್ಟಿಯ ಪ್ರಸ್ತಾವನೆ ದಿನಾಂಕ: 01-01-2013ರಲ್ಲಿದ್ದಂತೆ" ಎಂದು ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಂಭುಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂಮಾಪನ)

P.R. 148

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 102 ನಯೋಸೇ 2012 ಬೆಂಗಳೂರು, ದಿನಾಂಕ: 19-02-2014**

ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯ ಹೆಚ್ಚುವರಿ ನಿರ್ದೇಶಕರ ವೃಂದದ ದಿನಾಂಕ:01-01-2014ರಲ್ಲಿದಂತೆ ಈ ಕೆಳಕಂಡ ಕರಡು ಜ್ಯೇಷ್ಠತಾ ಪಟ್ಟಿಯಲ್ಲಿ ನೀಡಲಾಗಿರುವ ಸ್ಥಾನ, ಸೇವಾ ವಿವರಗಳು ಮುಂತಾದುವುಗಳ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅಂತಹ ಆಕ್ಷೇಪಣೆಗಳನ್ನು ಅವಶ್ಯವಿರುವ ದಾಖಲೆಗಳೊಂದಿಗೆ ಹಾಗೂ ಸಮರ್ಥನೆಗಳೊಂದಿಗೆ ಈ ಪ್ರಕಟಣೆ ಹೊರಡಿಸಿದ 15 ದಿನದೊಳಗಾಗಿ ಸಲ್ಲಿಸುವಂತೆ ಸೂಚಿಸಲಾಗಿದೆ.

**ದಿನಾಂಕ: 01-01-2014ರಲ್ಲಿದ್ದಂತೆ ನಗರ ಮತ್ತು ಗ್ರಾಮಾಂತರ ಯೋಜನಾ ಹೆಚ್ಚುವರಿ ನಿರ್ದೇಶಕರ ವೃಂದದ ಕರಡು ಜ್ಯೇಷ್ಠತಾ ಪಟ್ಟಿ**

| ಕ್ರ. ಸಂ. | ಹೆಸರು ಶ್ರೀ/ಶ್ರೀಮತಿ | ನೇರ ನೇಮಕಾತಿ/ ಮುಂಬಡ್ತಿ/ಇತರೆ | ಮೀಸಲಾತಿ | ಜನ್ಮದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ಜ್ಯೇಷ್ಠತೆಗೆ ನೈಜವಾಗಿ ಅರ್ಹತಾ ದಿನಾಂಕ |
|---|---|---|---|---|---|---|---|
| 1 | ಶ್ರೀ ಎಸ್.ಎಸ್. ಟೊಪಗಿ | ಮುಂಬಡ್ತಿ | – | 28.03.1954 | 06.01.1984 | 22.10.2008 | 21.10.2008 |
| 2 | ಶ್ರೀ ಎಸ್.ಬಿ. ಹೊನ್ನೂರ್ | ಮುಂಬಡ್ತಿ | – | 25.07.1955 | 15.11.1983 | 25.10.2008 | 25.10.2008 |
| 3 | ಶ್ರೀ ಬಿ.ಎಂ. ತಿರಕನಗೌಡರ್ | ಮುಂಬಡ್ತಿ | – | 01.05.1956 | 07.11.1983 | 28.04.2009 | 03.04.2009 |
| 4 | ಶ್ರೀ ಜೌಡೇಗೌಡ | ಮುಂಬಡ್ತಿ | – | 01.06.1956 | 20.12.1982 | 03.04.2009 | 03.04.2009 |
| 5 | ಶ್ರೀ ಎ.ವಿ. ರಂಗೇಶ್ | ಮುಂಬಡ್ತಿ | – | 06.09.1956 | 10.06.1983 | 08.04.2009 | 03.04.2009 |
| 6 | ಡಾ|| ಬಿ. ಮಹೇಂದ್ರ | ಮುಂಬಡ್ತಿ | – | 01.06.1959 | 23.04.1984 | 16.09.2009 | 15.09.2009 |
| 7 | ಶ್ರೀ ಕೆ.ಆರ್. ವಿರೇಂದ್ರನಾಥ | ಮುಂಬಡ್ತಿ | – | 08.11.1954 | 01.06.1975 | 30.04.2011 | 10.12.2010 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎಂ. ವಾಸುದೇವ ರಾವ್,**
ಸರ್ಕಾರದ ಅಧೀನ ಕಾರ್ಯದರ್ಶಿಗಳು
ನಗರಾಭಿವೃದ್ಧಿ ಇಲಾಖೆ

P.R. 145
SC - 100

## ಪೊಲೀಸ್ ಅಧೀಕ್ಷಕರವರ ಕಛೇರಿ, ಬಿ.ಎಂ. ರಸ್ತೆ, ರಾಮನಗರ ಜಿಲ್ಲೆ, ರಾಮನಗರ-562159

### ಅಧಿಸೂಚನೆ

**ಸಂಖ್ಯೆ : 140/ಸಿಬ್ಬಂದಿ(1) 2013-14, ದಿನಾಂಕ : 12-02-2014.**

**ವಿಷಯ :** ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್-ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013ರಡಿಯಲ್ಲಿ ರಾಮನಗರ ಜಿಲ್ಲೆಯಲ್ಲಿನ ವಿವಿಧ ವೃಂದಗಳಲ್ಲಿ ಹೈದ್ರಾಬಾದ್-ಕರ್ನಾಟಕ ಪ್ರದೇಶದವರಿಗಾಗಿ ಹುದ್ದೆಗಳನ್ನು ಗುರುತಿಸುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ : ಡಿಪಿಎಆರ್ 06 ಪಿಎಲ್ಎಕ್ಸ್ 2012, ದಿನಾಂಕ : 06-11-2013.
2. ಸರ್ಕಾರದ ಪತ್ರ ಸಂಖ್ಯೆ : ಒಇ 212 ಪೊಸಿಇ 2013, ದಿನಾಂಕ : 16-01-2014.
3. ಪೊಲೀಸ್ ಪ್ರಧಾನ ಕಛೇರಿಯ ಜ್ಞಾಪನ ಸಂಖ್ಯೆ : ಸಿಬ್ಬಂದಿ-4/89(ಬಿ)/2013-14, ದಿನಾಂಕ : 30-01-2014.

ಭಾರತ ಸಂವಿಧಾನದ ಅನುಚ್ಛೇದ 371 (ಜೆ) ಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ, ಹೊರಡಿಸಿರುವ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013ರ 03 ಮತ್ತು 13ನೇ ಉಪಬಂಧಗಳನ್ನು ಪರಿಶೀಲಿಸಲಾಯಿತು. ಈ ಉಪಬಂಧಗಳ ಅನುಸಾರ ಜಿಲ್ಲೆ/ಘಟಕದಲ್ಲಿ ಪ್ರಾದೇಶಿಕ ಮೀಸಲಾತಿ ಇಲ್ಲವೆ ರಾಜ್ಯವಾರು ಮೀಸಲಾತಿ ಅಡಿಯಲ್ಲಿ ವರ್ಗೀಕರಣವಾಗುವುದಿಲ್ಲವಾದ ಕಾರಣ ಯಾವುದೇ ಮೀಸಲಾತಿಯನ್ನು ನಿಗಧಿಪಡಿಸುವ ಅಗತ್ಯವಿರುವುದಿಲ್ಲ.

ಆದ್ದರಿಂದ, ರಾಮನಗರ ಜಿಲ್ಲೆಗೆ ಸಂಬಂಧಿಸಿದಂತೆ, ಹೈದ್ರಾಬಾದ್–ಕರ್ನಾಟಕ ವ್ಯಾಪ್ತಿಯಡಿಯಲ್ಲಿ ಸ್ಥಳೀಯ ವೃಂದ ರಚಿಸುವ ಹಾಗೂ ನೇರ ನೇಮಕಾತಿ ಮತ್ತು ಮುಂಬಡ್ತಿಯಲ್ಲಿ ಯಾವುದೇ ಮೀಸಲಾತಿ ಇರುವುದಿಲ್ಲವೆಂದು ಈ ಮೂಲಕ ಅಧಿಸೂಚನೆ ಹೊರಡಿಸಲಾಗಿದೆ.

P.R. 122 **ಪೊಲೀಸ್ ಅಧೀಕ್ಷಕರು,**

SC-05 ರಾಮನಗರ ಜಿಲ್ಲೆ, ರಾಮನಗರ.

## ನಗರಾಭಿವೃದ್ಧಿ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ : ನಅಇ 185 ಬೆಂರೂಪ್ರಾ 2013, ಬೆಂಗಳೂರು, ದಿನಾಂಕ : 07–02–2014.

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 5ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹೊಸದುರ್ಗ ಪರಿಷ್ಕೃತ ಸ್ಥಳೀಯ ಯೋಜನಾ ಪ್ರದೇಶದ ಹಾಲಿ ಭೂ ಉಪಯೋಗಗಳ ನಿರ್ಧರಣಾ ದಿನಾಂಕವನ್ನು ದಿನಾಂಕ : 26–06–2013 ಎಂದು ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 124 **ಟಿ.ಎಂ. ವಾಸುದೇವ ರಾವ್**

SC-150 ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಕಂದಾಯ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ : ಕಂಇ 69 ಎಲ್ಆರ್ಎಂ 2013, ಬೆಂಗಳೂರು, ದಿನಾಂಕ : 05–02–2014.

ಶ್ರೀ ರಾಮಕೃಷ್ಣ ಗೃಹ ನಿರ್ಮಾಣ ಸಹಕಾರ ಸಂಘ ನಿ, ಮೈಸೂರು ಇವರಿಗೆ ಮೈಸೂರು ತಾಲ್ಲೂಕು, ಇಲವಾಲ ಹೋಬಳಿ, ಕೆ. ಹೆಮ್ಮನಹಳ್ಳಿ ಗ್ರಾಮದ ಸ.ನಂ. 194, 199 ಹಾಗೂ ಇತರೆಗಳಲ್ಲಿ 33 ಎಕರೆ 11 ಗುಂಟೆ ಹಾಗೂ ಹುಯಿಲಾಳು ಗ್ರಾಮದ ಸ.ನಂ. 180 ಹಾಗೂ ಇತರೆಗಳಲ್ಲಿ 11 ಎಕರೆ 0.4 1/2 ಗುಂಟೆ ಹೀಗೆ ಒಟ್ಟು 44–15 1/2 ಎಕರೆ/ಗುಂಟೆ ಜಮೀನನ್ನು **ವಸತಿ** ಉದ್ದೇಶಕ್ಕಾಗಿ ಖರೀದಿಸಲು ಜಿಲ್ಲಾಧಿಕಾರಿಗಳು ಮೈಸೂರು ಇವರ ಅಧಿಕೃತ ಜ್ಞಾಪನ ಸಂಖ್ಯೆ : ಎಲ್ಆರ್ಎಫ್/ಎಸ್‌ಪಿಎಲ್/03/2009–10, ದಿನಾಂಕ : 22–07–2010 ರಲ್ಲಿ ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109 ರಡಿಯಲ್ಲಿ ನೀಡಲಾದ ಅನುಮತಿಯ ಅವಧಿಯು ಮುಕ್ತಾಯವಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ಭೂ ಸುಧಾರಣೆ ನಿಯಮಗಳು 1974ರ ನಿಯಮ 38(ಡಿ)(4)(i) ರಂತೆ ಸದರಿ ಅವಧಿಯನ್ನು ದಿನಾಂಕ : 22–07–2012 ರಿಂದ ಅನ್ವಯಿಸುವಂತೆ 5 ವರ್ಷದ ಮಿತಿಗೆ ಒಳಪಟ್ಟು ಕಾಲಾವಧಿ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 127 **ಬಿ.ಎಂ. ದಾಕ್ಷಾಯಣಮ್ಮ**

SC-20 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

## ಕಂದಾಯ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ : ಕಂಇ 70 ಎಲ್ಆರ್ಎಂ 2013, ಬೆಂಗಳೂರು, ದಿನಾಂಕ : 05–02–2014.

ಸರ್ಕಾರಿ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ, ಮೈಸೂರು ಇವರಿಗೆ ಮೈಸೂರು ತಾಲ್ಲೂಕು, ವಾಜಮಂಗಲ ಗ್ರಾಮದ ಸ.ನಂ. 32/1, ಮತ್ತು ಇತರೆಗಳಲ್ಲಿ 103–08 ಎಕರೆ ಜಮೀನನ್ನು **ವಸತಿ ನಿರ್ಮಾಣದ** ಉದ್ದೇಶಕ್ಕಾಗಿ ಖರೀದಿಸಲು ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 11 ಎಲ್ಆರ್ಎಂ 2010, ದಿನಾಂಕ : 07–01–2011ರನ್ವಯ ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 199(1ಎ)ರಡಿಯಲ್ಲಿ ನೀಡಲಾದ ಅನುಮತಿಯ ಅವಧಿಯು ಮುಕ್ತಾಯವಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ಭೂ ಸುಧಾರಣೆ ನಿಯಮಗಳು 1974ರ ನಿಯಮ 38(ಡಿ)(4)(i) ರಂತೆ ಸದರಿ ಅವಧಿಯನ್ನು ದಿನಾಂಕ : 07–01–2013 ರಿಂದ ಅನ್ವಯಿಸುವಂತೆ 5 ವರ್ಷದ ಮಿತಿಗೆ ಒಳಪಟ್ಟು ಕಾಲಾವಧಿ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 128 **ಬಿ.ಎಂ. ದಾಕ್ಷಾಯಣಮ್ಮ**

SC-20 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕಂಇ 71 ಎಲ್‌ಆರ್‌ಎಂ 2013, ಬೆಂಗಳೂರು, ದಿನಾಂಕ : 05-02-2014.**

ಮೈಟೆಕ್ ಎಸ್ಟೇಟ್ ಡೆವಲಪರ್ಸ್ ಅಂಡ್ ಬಿಲ್ಡರ್ಸ್ ಪ್ರೈ ಲಿ., ಮೈಸೂರು ಇವರಿಗೆ ಮೈಸೂರು ತಾಲ್ಲೂಕು, ವರುಣಾ ಹೋಬಳಿ, ವಾಜಮಂಗಲ ಗ್ರಾಮದ ಸ.ನಂ. 208, 209 ಹಾಗೂ ಇತರೆಗಳಲ್ಲಿ 41-18 1/2 ಎಕರೆ ಜಮೀನನ್ನು **ವಸತಿ** ಉದ್ದೇಶಕ್ಕಾಗಿ ಖರೀದಿಸಲು ಜಿಲ್ಲಾಧಿಕಾರಿಗಳ ಅಧಿಕೃತ ಜ್ಞಾಪನ ಸಂಖ್ಯೆ : ಎಲ್‌ಆರ್‌ಎಫ್/ಎಸ್‌ಪಿಎಲ್/35/2008-09, ದಿನಾಂಕ : 22-07-2010 ರನ್ವಯ ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109 ರಡಿಯಲ್ಲಿ ನೀಡಲಾದ ಅನುಮತಿಯ ಅವಧಿಯು ಮುಕ್ತಾಯವಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ಭೂ ಸುಧಾರಣೆ ನಿಯಮಗಳು 1974ರ ನಿಯಮ 38(ಡಿ)(4)(i) ರಂತೆ ಸದರಿ ಅವಧಿಯನ್ನು ದಿನಾಂಕ : 22-07-2012 ರಿಂದ ಅನ್ವಯಿಸುವಂತೆ 5 ವರ್ಷದ ಮಿತಿಗೆ ಒಳಪಟ್ಟು ಕಾಲಾವಧಿ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ದಾಕ್ಷಾಯಣಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

**P.R. 129**

**SC-20**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕಂಇ 61 ಎಲ್‌ಆರ್‌ಎಂ 2013, ಬೆಂಗಳೂರು, ದಿನಾಂಕ : 05-02-2014.**

ಅಧ್ಯಕ್ಷರು, ಫೌಂಡ್ರಿ ಕ್ಲಸ್ಟರ್ ಬೆಳಗಾವಿ, ಇವರಿಗೆ ಬೆಳಗಾವಿ ತಾಲ್ಲೂಕಿನ ಸಂತಿಬಸ್ತವಾಡ ಗ್ರಾಮದ ರಿ.ಸ.ನಂ. 50/2 ರಲ್ಲಿ 02 ಎಕರೆ 02 ಗುಂಟೆ ಕೃಷಿ ಜಮೀನನ್ನು ಕೈಗಾರಿಕಾ ಉದ್ದೇಶಕ್ಕಾಗಿ ಖರೀದಿಸಲು ಜಿಲ್ಲಾಧಿಕಾರಿಗಳು ಬೆಳಗಾವಿ ಇವರು ಅಧಿಸೂಚನೆ ಕ್ರ.ಕಂಶಾ/ಕೆ.ಎಲ್.ಆರ್: ಕಲಂ 109 : ಸಿಆರ್-19/08-09, ದಿನಾಂಕ : 17-02-2009 ರಲ್ಲಿ ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109 ರಡಿಯಲ್ಲಿ ನೀಡಲಾದ ಅನುಮತಿಯ ಅವಧಿಯು ಮುಕ್ತಾಯವಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ಭೂ ಸುಧಾರಣೆ ನಿಯಮಗಳು 1974ರ ನಿಯಮ 38(ಡಿ)(4)(i) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 125 ಎಲ್‌ಆರ್‌ಎ 2002, ದಿನಾಂಕ : 19-08-2002ರಂತೆ ಮೇಲಿನ ಸಂಸ್ಥೆಗೆ ದಿನಾಂಕ : 16-02-2011 ರಿಂದ ಅನ್ವಯವಾಗುವಂತೆ ಇನ್ನೂ 5 ವರ್ಷಗಳವರೆಗೆ ಕಾಲಾವಧಿ ವಿಸ್ತರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ದಾಕ್ಷಾಯಣಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

**P.R. 130**

**SC-20**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಕಂಇ 72 ಎಲ್‌ಆರ್‌ಎಂ 2013, ಬೆಂಗಳೂರು, ದಿನಾಂಕ : 05-02-2014.**

ಶ್ರೀ ಮೂಕಾಂಬಿಕ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಮೈಸೂರು ಇವರಿಗೆ ಮೈಸೂರು ತಾಲ್ಲೂಕು, ಇಲವಾಲ ಹೋಬಳಿ, ಬೆಳವಾಡಿ ಗ್ರಾಮದ ಸ.ನಂ. 144, 147, 149 ಹಾಗೂ ಇತರೆಗಳಲ್ಲಿ ಒಟ್ಟು 21-29 ಎಕರೆ ಜಮೀನನ್ನು **ವಸತಿ** ಉದ್ದೇಶಕ್ಕಾಗಿ ಖರೀದಿಸಲು ಜಿಲ್ಲಾಧಿಕಾರಿಗಳ ಅಧಿಕೃತ ಜ್ಞಾಪನ ಸಂಖ್ಯೆ : ಎಲ್‌ಆರ್‌ಎಫ್/ಎಸ್‌ಪಿಎಲ್/2/2009-10, ದಿನಾಂಕ : 26-06-2010 ರಲ್ಲಿ ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109 ರಡಿಯಲ್ಲಿ ನೀಡಲಾದ ಅನುಮತಿಯ ಅವಧಿಯು ಮುಕ್ತಾಯವಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ಭೂ ಸುಧಾರಣೆ ನಿಯಮಗಳು 1974ರ ನಿಯಮ 38(ಡಿ)(4)(i) ರಂತೆ ಸದರಿ ಅವಧಿಯನ್ನು ದಿನಾಂಕ : 26-06-2012 ರಿಂದ ಅನ್ವಯಿಸುವಂತೆ 5 ವರ್ಷದ ಮಿತಿಗೆ ಒಳಪಟ್ಟು ಕಾಲಾವಧಿ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ದಾಕ್ಷಾಯಣಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ).

**P.R. 131**

**SC-20**

## PROCEEDINGS OF THE COMMISSIONER OF COMMERCIAL TAXES, (KARNATAKA), BANGALORE- CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

**Sub :** KVAT Act, 2003 - Clarification under Section 59(4) regarding the rate of tax applicable on certain commodities-reg.

**Ref :** Application dated: 18-11-2013 of M/s. K.K. Aromas, Bangalore (TIN. 29830819351)

In the application cited above of M/s. K.K. Aromas, No.428, 10th Cross, Shastrinagar, Bangalore-560028 has sought clarification regarding the rate of tax applicable on certain commodities.

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO.CLR.CR.117/13-14, DATED: 05-02-2014**

It is clarified that 'Davanam oil, Ginger oil, Palmarosa oil and Patchouli oil' are liable to tax at 14.5% from 01.08.2012 as unscheduled goods under section 4(1) (b)(iii) of the Karnataka Value Added Tax Act, 2003.

**P.R. 123**
**SC-100**

**AJAY SETH**
Commissioner of Commercial Taxes,
(Karnataka), Bangalore

## ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಪಿ.ಬಿ. ನಂ. 5309, ಬೆಂಗಳೂರು

## ಅಧಿಸೂಚನೆ

### ಸಂಖ್ಯೆ : ಕೃಮಾಇ/03/ಚುನಾವ/2011, ಬೆಂಗಳೂರು, ದಿನಾಂಕ : 04–02–2014.

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 10(1)(viii) ರಲ್ಲಿನ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾದ ಪಿ.ಎಸ್. ವಸ್ತ್ರದ ಆದ ನಾನು, ಕಾಯ್ದೆಯ ಕಲಂ 10ರ ಪ್ರಕಾರ ರಚಿತವಾಗಿರುವ ಈ ಕೆಳಕಂಡ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಅವುಗಳ ಮುಂದೆ ಕಾಣಿಸಿರುವ ಅಧಿಕಾರಿಗಳನ್ನು ಇಲಾಖಾ ಪ್ರತಿನಿಧಿಯಾಗಿ ನಾಮಕರಣ ಮಾಡಿದ್ದೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಸಮಿತಿಯ ಹೆಸರು | ಸದಸ್ಯರನ್ನಾಗಿ ನಾಮಕರಣ ಮಾಡಲಾಗಿರುವ ಅಧಿಕಾರಿಗಳು |
|---|---|---|---|
| 1. | ಕೊಪ್ಪಳ | ಗಂಗಾವತಿ | ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ರಾಯಚೂರು |
| 2. | | ಭತ್ತ ಮತ್ತು ಅಕ್ಕಿ ಉತ್ಪನ್ನಗಳ ವಿಶೇಷ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಕಾರಟಗಿ | ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ರಾಯಚೂರು |
| 3. | ಬಾಗಲಕೋಟೆ | ಬಾಗಲಕೋಟೆ | ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಿಜಾಪುರ |
| 4. | ಶಿವಮೊಗ್ಗ | ಸಾಗರ | ಉಪ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ. |
| 5. | | ಸೊರಬ | ಉಪ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ. |
| 6. | | ಹೊಸನಗರ | ಉಪ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ. |
| 7. | ಚಿತ್ರದುರ್ಗ | ಹೊಸದುರ್ಗ | ಉಪ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ. |
| 8. | | ಹೊಳಲ್ಕೆರೆ | ಉಪ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ. |
| 9. | ಗುಲ್ಬರ್ಗಾ | ಗುಲ್ಬರ್ಗಾ | ಕಾರ್ಯದರ್ಶಿ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ರಾಯಚೂರು |
| 10. | | ಜೇವರ್ಗಿ | ಸಹಾಯಕ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ |
| 11. | ಬಿಜಾಪುರ | ಸಿಂಧಗಿ | ಸಹಾಯಕ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬಿಜಾಪುರ ಜಿಲ್ಲೆ, ಬಿಜಾಪುರ |
| 12. | | ಇಂಡಿ | ಸಹಾಯಕ ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬಿಜಾಪುರ ಜಿಲ್ಲೆ, ಬಿಜಾಪುರ |

**ಪಿ.ಎಸ್. ವಸ್ತ್ರದ**
ವ್ಯವಸ್ಥಾಪಕ ನಿರ್ದೇಶಕರು,
ಕರ್ನಾಟಕ ರಾಜ್ಯ ಕೃಷಿ ಮಾರಾಟ ಇಲಾಖೆ.

**P.R. 137**
**SC-25**

## DIRECTORATE OF ECONOMICS AND STATISTICS, BANGALORE-1

**Consumer Price Index Numbers for Industrial Workers**

**No. DES 29 PWX 2013, dated 13-02-2014**

**State : Karnataka** **Base : 1987-88=100** **Month : December 2013**

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| I. | FOOD : | | | | | | | | | | | |
| | (a) Cereals & Cereals Products | 893 | 936 | 1080 | 880 | 820 | 957 | 1010 | 1002 | 801 | 994 | 946 |
| | (b) Pulses & Pulses Products | 697 | 747 | 791 | 869 | 717 | 742 | 755 | 790 | 700 | 741 | 712 |
| | (c) Oil & Fats | 431 | 460 | 481 | 462 | 439 | 489 | 446 | 473 | 369 | 480 | 421 |
| | (d) Meat, Fish & Eggs | 909 | 1000 | 1115 | 962 | 1022 | 1023 | 956 | 1031 | 725 | 1152 | 1017 |
| | (e) Milk & Milk Products | 708 | 672 | 791 | 844 | 716 | 802 | 678 | 783 | 684 | 720 | 686 |
| | (f) Condiments & Spices | 745 | 797 | 1050 | 1035 | 742 | 681 | 796 | 830 | 630 | 911 | 784 |
| | (g) Vegetables & Fruits | 866 | 851 | 1017 | 971 | 894 | 859 | 870 | 1001 | 783 | 827 | 1183 |
| | (h) Other Food | 587 | 839 | 822 | 700 | 716 | 590 | 643 | 693 | 678 | 680 | 608 |
| | FOOD GROUP INDEX | 773 | 829 | 939 | 832 | 764 | 794 | 825 | 890 | 708 | 854 | 816 |
| II. | Pan, Supari, Tobacco & Intoxicants | 834 | 1039 | 887 | 816 | 700 | 844 | 744 | 832 | 592 | 737 | 826 |
| III. | Fuel & Light | 644 | 621 | 658 | 767 | 631 | 652 | 582 | 708 | 571 | 834 | 509 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing Bedding & Footwear | 334 | 553 | 481 | 456 | 399 | 439 | 574 | 719 | 352 | 708 | 235 |
| VI. | Miscellaneous : | | | | | | | | | | | |
| | (a) Medical Care | 720 | 966 | 587 | 492 | 387 | 331 | 535 | 574 | 386 | 462 | 321 |
| | (b) Education, Recreation & Amusement | 786 | 791 | 1099 | 461 | 942 | 1140 | 824 | 640 | 1090 | 1530 | 1005 |
| | (c) Transport & Communication | 703 | 749 | 672 | 659 | 868 | 719 | 667 | 942 | 766 | 652 | 714 |
| | (d) Personal Care & effects | 422 | 497 | 571 | 558 | 598 | 457 | 478 | 509 | 521 | 430 | 432 |
| | (e) Others | 536 | 501 | 648 | 800 | 459 | 472 | 523 | 686 | 389 | 673 | 460 |
| | Miscellaneous Group | 593 | 654 | 703 | 590 | 636 | 611 | 583 | 637 | 613 | 697 | 557 |
| | GENERAL INDEX | 626 | 677 | 737 | 675 | 608 | 630 | 671 | 734 | 594 | 726 | 558 |
| | To convert to Base 1960 Multiply by Linking Factor. | 7.39 | 9.19 | 8.27 | - | 8.26 | 8.56 | 9.25 | 7.92 | 9.31 | - | - |

**JOINT DIRECTOR,**
Directorate of Economics & Statistics
Government of Karnataka, Bangalore.

